# ವೇದಾಂತದಲ್ಲಿ ಧೀರರು



ಆಧ್ಯಾತ್ಮವಿದ್ಯಾಪ್ರವೀಣ, ಮಹಾಮಹೋಪಾಧ್ಯಾಯ

ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾ



**"ವೇದಾಂತಗಳೂ ವೇದಾಂಗಗಳೂ"**-106 ಕೃತಿರತ್ನವನ್ನು ವೈ. ಎಸ್. ಭಗವಾನ್, ಬಿ. ಎಸ್. ಉಮಾ,
ಎನ್. ನಾಗರತ್ನಾ, ಡಿ. ಶಾಮಣ್ಣನವರು ಲೋಕಾರ್ಪಣೆಮಾಡುತ್ತಿದ್ದಾರೆ; 22-6-2019, ಶನಿವಾರ




**"ಗುರುಸ್ತುತಿ ಸಂವತ್ಸರ"**-103ನೇ ಕೃತಿರತ್ನದ ಲೋಕಾರ್ಪಣ ಸಮಾರಂಭದಲ್ಲಿ
ಡಾ॥ ಪ್ರೊ. ಎಂ. ಕೆ. ಶ್ರೀಧರ್‌ರವರು ಕೃತಿಯನ್ನುದ್ದೇಶಿಸಿ ಮಾತನಾಡುತ್ತಿದ್ದಾರೆ; 29-1-2019 ಮಂಗಳವಾರ

ಆನಂದಗ್ರಂಥಮಾಲಾ–ಕುಸುಮ 109

# ವೇದಾಂತದಲ್ಲಿ ಧೀರರು


**ಪ್ರವಚನಕಾರರು ಮತ್ತು ಲೇಖಕರು**

ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ, ಅದ್ವೈತಜ್ಞಾನಸಿಂಧು, ವಿದ್ಯಾವಿಧಿನಿಧಿ,
ವೇದಶ್ರೀ, ವೇದಾಂತವಾರಿಧಿ, ವೇದಾಂತಭಾಸ್ಕರ, ವೇದಾಂತಸರಸ್ವತಿ, ವೇದಾಂತಕೇಸರಿ,
ವೇದಾಂತ ಸಾರ್ವಭೌಮ, ವೇದಾಂತಕಾಮಧೇನು, ವೇದಾಂತರಾಜಹಂಸ, ವಿವೇಕ ಭಾಸ್ಕರ,
ಶಾಸ್ತ್ರನಿಧಿ, ಅದ್ವೈತವೇದಾಂತಕೇಸರಿ, ಅದ್ವೈತಜ್ಞಾನತೇಜ, ವೇದಾಂತಸಾಗರ, ವೇದಾಂತರತ್ನ,
ಶಾಸ್ತ್ರವಿದ್ಯಾನಿಧಿ, ವೇದಾಂತಚಿಂತಾಮಣಿ, ಅದ್ವೈತಸಾರತಿಲಕ, ವೇದಾಂತಪ್ರಭಾಕರ,
ಅದ್ವೈತ ವೇದಾಂತವಾರಿಧಿ, ಅದ್ವೈತವೇದಾಂತಚೂಡಾಮಣಿ, ಅದ್ವೈತವೇದತಿಲಕ,
ಅದ್ವೈತ ವೇದಾಂತವಿಚಕ್ಷಣ, ವೇದಾಂತಸಾರತಿಲಕ, ವೇದಾಗಮವಿದ್ಯಾಸಾಗರ,
ಸುವರ್ಣಕರ್ನಾಟಕ ಕನ್ನಡಿಗ, ಭುವಿ ವೇದಾಂತೈಕಶ್ರೇಷ್ಠರತ್ನ, ರಾಷ್ಟ್ರರತ್ನ,
ಸುವರ್ಣಕರ್ನಾಟಕ ಸುವರ್ಣವೇದಾಂತಿ, ವೇದಾಂತರತ್ನಾಕರ, ಸ್ವರ್ಣಭೂಷಣ,
ವೇದಾಂತಗಂಗಾಧರ, ಅದ್ವೈತವೇದಾಂತವಾಚಸ್ಪತಿ, ಅದ್ವೈತವೇದಾಂತಶಿಖಾಮಣಿ,
ಗೋವಿಂದಲಕ್ಷ್ಮೀಪುರಸ್ಕಾರ, ಬಸವನಗುಡಿರತ್ನ, ಶ್ರೀ ಶ್ರೀ ಸದ್ಗುರುಹೃದಯಭಾಸ್ಕರ,
ಅದ್ವೈತವೇದಾಂತ ಸವ್ಯಸಾಚಿ, ಸದ್ಗುರು ಸೇವಾ ಧುರೀಣ, ಪರಿಪೂರ್ಣ ಮಹನೀಯ ೨೦೧೨,
ಮಂತ್ರಾಲಯದ ಶ್ರೀಶ್ರೀಸುಶಮೀಂದ್ರತೀರ್ಥಸ್ವಾಮೀಜಿ **"ರಾಷ್ಟ್ರೀಯ ಜ್ಞಾನ ಪುರಸ್ಕಾರ"**,
ಅದ್ವೈತ ವೇದಾಂತ ಪ್ರತಿಭಾ ಪ್ರಕಾಶ, ಜಿಜ್ಞಾಸುಕಾಮಧೇನು, ಮುಮುಕ್ಷುಮೋಕ್ಷಧೇನು,
ಉಪನಿಷದ್ ರತ್ನಾಕರ, ಶ್ರೀ ಸಿದ್ಧಾರೂಢ ಸದ್ಭಾವನಾ ಪ್ರಶಸ್ತಿ, ವೇದಾಂತ ಪ್ರವಚನ ಚತುರ,
ವೇದಾಂತ ಪುರುಷಮಣಿ, ಶಾಂಕರಾದ್ವೈತವೇದಾಂತಾಚಾರ್ಯ, ಅದ್ವೈತವೇದಾಂತಸಾರಥಿ,
ಶ್ರೀಪ್ರಸನ್ನಗಣಪತಿ (ಬಲಮುರಿ) ಅನುಗ್ರಹ ಪ್ರಶಸ್ತಿ—೨೦೧೫, ಪ್ರಾಜ್ಞ ವೇದಾಂತ ಯೋಗ,
ವೇದಾಂತ ಚಕ್ರವರ್ತಿ, ಸರ್ವಋತು ಪ್ರವಚನಕಾರ, ವೇದಾಂತವಿದ್ಯಾಕೌಸ್ತುಭ,
ಅಧ್ಯಾತ್ಮಪ್ರವಚನಭೂಷಣ, "೭೦ರ ವೀರ ವೇದಾಂತಿ", ಶಾಂಕರಭಾಷ್ಯಭಾಸ್ಕರ, ವೇದ ವಾರಿಧಿ
ಬ್ರಹ್ಮವಿದ್ಯಾಪಾರಂಗತ, ಸಹೃದಯ ಅಧ್ಯಾತ್ಮಚಿಂತಕ, ವಿಪ್ರರತ್ನಶಿರೋಮಣಿ, ಅದ್ಭುತಶಾಂಕರರತ್ನ
**ಸುವರ್ಣ ಕರ್ನಾಟಕ "ರಾಜ್ಯೋತ್ಸವ ಪ್ರಶಸ್ತಿ"—೨೦೦೫**, ಮತ್ತು
**"ಸುವರ್ಣ ಕರ್ನಾಟಕ ಸಾಹಿತ್ಯ ಪ್ರಶಸ್ತಿ"** ಪುರಸ್ಕೃತ,

**ಅದ್ವೈತ ವಾಚಸ್ಪತಿ, ಮಹಾಮಹೋಪಾಧ್ಯಾಯ ವೇ. ಬ್ರ. ಶ್ರೀ ವಿದ್ವಾನ್**
**ಡಾ॥ ಕೆ. ಜಿ. ಸುಬ್ರಾಯಶರ್ಮಾ**, ಎಂ.ಎ., ಡಿ.ಲಿಟ್.
**(ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳ ಅಂತೇವಾಸಿ ಸಾಕ್ಷಾತ್‌ಶಿಷ್ಯರು)**



**ಶ್ರೀ ನಿತ್ಯಾನಂದ ಪ್ರಿಂಟರ್ಸ್**
ಅಶೋಕನಗರ, ಬೆಂಗಳೂರು - 560 050
**ಏಪ್ರಿಲ್ 2019**

**"ವೇದಾಂತದಲ್ಲಿ ಧೀರರು" - 109**
**"Vedaantadalli Dheeraru' – 109**
**109th** Flower in the '**Aananda Grantha Maalaa**' Series
*by* Vedanta Chakravarthi, **Mahaamahopaadhyaaya**
Vidwan **Dr. K. G. SUBRAYA SHARMA, M.A., D.Litt.**
# 127, "**Seetha-Preethi**", Balaji Nagar,
ICICI Bank Cross Road, Uttarahalli Main Road
**P. O. Subrahmanyapura, Bengaluru - 560 061**
**Ph : 080-2639 6786 ; Mobile : 98862 81622**
e-mail: kgssharma@gmail.com
website: kgssharma.in

**Pages: 48; Price: Rs. 40/- ; ಬೆಲೆ: ರೂ. 40/-**

**First Edition : April 2019 ; 1000 Copies**



**For Copies and other Books Please Contact**
**Vedanta Ratna, Mahaamahopaadhyaaya, Vidwan**
**Dr. K. G. SUBRAYA SHARMA, M.A., D.Litt.**
**# 127, "Seetha-Preethi", Balaji Nagar,**
**ICICI Bank Cross Rd., Uttarahalli Main Rd.**
**P. O. Subrahmanyapura, Bengaluru - 560 061**
**Ph: 080-2639 6786 ; Mobile: 98862 81622**
**e-mail: kgssharma@gmail.com**
**website: kgssharma.in**

*Printed and Published by*
B. N. Nataraj
Sri Nithyananda Printers
# 46, 4th Cross, Ashoknagar, BSK 1st Stage
Bengaluru - 560 050. ✆ 2242 6027

# ನಮೋ ನಮಃ ಸದ್ಗುರುಪಾದುಕಾಭ್ಯಾಮ್

ನನ್ನ ಅಂತರಾರಾಧ್ಯ ಸದ್ಗುರುಗಳಾದ **ಪೂಜ್ಯಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರ** ಪರಮಮಂಗಳಪಾವನಚರಣಾರವಿಂದಂಗಳಲ್ಲಿ ಭಕ್ತಿಪೂರ್ವಕವಾದ ನನ್ನ ಪ್ರೀತಿಯ ಪ್ರಣಾಮಗಳು. **ವೇದಾಂತದಲ್ಲಿ ಅನ್ವರ್ಥ ಧೀರರಾದ** ಸದ್ಗುರುಗಳು ನನಗೆ ಪಾಠಮಾಡುವಾಗ, ವಿಶೇಷವಾಗಿ ಕಾಠಕೋಪನಿಷದ್ಭಾಷ್ಯವನ್ನು ಪಾಠಮಾಡುವಾಗ (೧೯೬೦-೬೨) **ಮತ್ವಾ ಧೀರೋ ನ ಶೋಚತಿ, ಮತ್ವಾ ಧೀರೋ ಹರ್ಷಶೋಕೌ ಜಹಾತಿ, ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್, ದೃಷ್ಟ್ವಾ ಧೃತ್ವಾ ಧೀರಃ**— ಈ ಮಂತ್ರಗಳನ್ನೆಲ್ಲ ಹೇಳಿಸಿ ಅರ್ಥವನ್ನೂ ಹೇಳುತ್ತಿದ್ದರು. ಇವರೆಲ್ಲರೂ **ವೇದಾಂತದಲ್ಲಿ ಧೀರರು** ಎಂದು ಸದ್ಗುರುಗಳು ನನಗೆ ಹೇಳುತ್ತಿದ್ದರು.

ನಾನೂ ಕೂಡ ಆಗಾಗ್ಗೆ **ಧೀರಃ** ಎಂಬ ಪದವು ಬಂದಾಗಲೆಲ್ಲ ಗುರುಗಳ ಆ ಉಪದೇಶದ ಮಾತುಗಳನ್ನೇ ನೆನಪುಮಾಡಿಕೊಂಡು, ನನ್ನ ಪ್ರವಚನಗಳಲ್ಲಿ **"ಇವರು ವೇದಾಂತದ ಧೀರರು"** ಎಂದು ನೂರಾರು ಸಾರಿ ಹೇಳುತ್ತಿರುತ್ತೇನೆ. ಈ ಮಾತುಗಳನ್ನು ಕೇಳಿ ಶ್ರೋತೃಗಳು, ನನಗೆ **"ವೇದಾಂತದಲ್ಲಿ ಧೀರರು"** ಎಂದು ಒಂದು ಪುಸ್ತಕವನ್ನು ಬರೆಯುವಂತೆ ಪ್ರೀತಿಯಿಂದ ಹೇಳುತ್ತಲೇ ಇದ್ದರು. ಹೀಗಾಗಿ ಆ ಕಾಲವು ಈಗ ಬಂದಂತಾಗಿದೆ. ಅಭಿಮಾನಿಗಳ ಅಪೇಕ್ಷೆಯಂತೆ, ಸದ್ಗುರುಗಳ ಪ್ರೇರಣೆಯಂತೆ, **"ವೇದಾಂತದಲ್ಲಿ ಧೀರರು"** ಎಂಬೀ ಗ್ರಂಥವನ್ನು ಬರೆದು ಸದ್ಗುರುಗಳಿಗೇ ಪ್ರೀತಿಯಿಂದ ಹಾಗೂ ಭಕ್ತಿಯಿಂದ ಸಮರ್ಪಿಸಿರುತ್ತೇನೆ.

ಬ್ರಹ್ಮಜ್ಞಾನಕ್ಕಾಗಿ ಪ್ರಯತ್ನಿಸುವವರೇ **ಧೀರರು**, ಬಾಹ್ಯವಿಷಯಗಳಿಂದ ವಿರಕ್ತರಾಗಿ ವೇದಾಂತಚಿಂತನೆಮಾಡುತ್ತಿರುವವರೇ **ಧೀರರು**, ಮಾನವಜನ್ಮದ ಮಹತ್ತ್ವವನ್ನು ಅರ್ಥಮಾಡಿಕೊಂಡು ಮೋಕ್ಷವನ್ನು ಹೊಂದಲೇಬೇಕೆಂದು ಪ್ರಯತ್ನಿಸುವವರೇ **ಧೀರರು**, ಸಾಧನಚತುಷ್ಟಯಸಂಪನ್ನರಾಗಿ ಬ್ರಹ್ಮವನ್ನು ವಿಚಾರಮಾಡುವವರೇ **ವೇದಾಂತದಲ್ಲಿ ಧೀರರು** ಎಂದೆಲ್ಲಾ ನನ್ನ ಸದ್ಗುರುಗಳು ನನಗೆ ನನ್ನ ಗುರುಕುಲವಾಸದ ೧೯೫೫ ರಿಂದ ೧೯೭೫ ರವರೆಗಿನ ಆ **ಸುವರ್ಣಯುಗ**ದಲ್ಲಿ ಹೇಳುತ್ತಿದ್ದರು. ಅದನ್ನೆಲ್ಲ ಈ ಗ್ರಂಥದಲ್ಲಿ ಸಂಕ್ಷೇಪವಾಗಿ ಹಾಗೂ ಸರಳವಾಗಿ ಬರೆದಿರುತ್ತೇನೆ. ಮುಮುಕ್ಷುಗಳಿಗೆ ಇದರಿಂದ ಧೈರ್ಯ ಉತ್ಸಾಹಗಳು ಅಭಿವೃದ್ಧಿಗೊಳ್ಳುವುದರಲ್ಲಿ ಸಂಶಯವಿಲ್ಲ.

ಶ್ರೀ'**ವಿಳಂಬಿ**'ನಾಮಸಂವತ್ಸರದ
ಫಾಲ್ಗುಣ ಕೃಷ್ಣ ಅಷ್ಟಮೀ
28-3-2019, ಗುರುವಾರ

ಸದ್ಗುರು ಚರಣಾರಾಧಕಃ
**ಡಾ॥ ಕೆ. ಜಿ. ಸುಬ್ರಾಯಶರ್ಮಾ**
080-2639 6786, 98862 81622

# ವೇದಾಂತದಲ್ಲಿ ಧೀರರು-109

ಪ್ರಿಯ ವಾಚಕರೇ, ನಿಮ್ಮಗಳ ಪ್ರೀತಿಯ ಪ್ರೋತ್ಸಾಹಕ್ಕೆ ನನ್ನ ವಂದನೆಗಳು. ನನ್ನ, ಈ ವರೆಗಿನ ೧೦೮ ವೇದಾಂತಪುಸ್ತಕಗಳನ್ನು ತಾವು ಓದಿ ಆನಂದಿಸುತ್ತಾ ಲೇಖಕನಾದ ನನಗೆ ಹೆಚ್ಚಿನ ಉತ್ಸಾಹವನ್ನೂ ಸಂತೋಷವನ್ನೂ ಉಂಟು ಮಾಡಿದ್ದೀರಿ. ಇದೆಲ್ಲವೂ ಸದ್ಗುರುಗಳ ಆಶೀರ್ವಾದದ ಫಲವಲ್ಲದೇ ಮತ್ತೇನು?

ಈಗ ನಿಮ್ಮ ಕೈಗಳಲ್ಲಿರುವ ಈ ಗ್ರಂಥಕ್ಕೆ **"ವೇದಾಂತದಲ್ಲಿ ಧೀರರು"** ಎಂದು ಹೆಸರು. ವೇದಾಂತಗಳಲ್ಲಿ ಎಂದರೆ ಉಪನಿಷತ್ತುಗಳಲ್ಲಿ ಯಾರನ್ನು **"ಧೀರರು"** ಎಂದು ಕರೆದಿದ್ದಾರೆ? ಎಂಬುದನ್ನು ವೇದಾಂತಮಂತ್ರಗಳ ಹಾಗೂ ಶ್ರೀಶಂಕರರ ಭಾಷ್ಯವಾಕ್ಯಗಳ ಆಧಾರದಿಂದ ಈ ಗ್ರಂಥವನ್ನು ಬರೆದಿರುತ್ತೇನೆ. ಹಣವಂತರನ್ನು, ಕೀರ್ತಿವಂತರನ್ನು, ವಿದ್ಯಾವಂತರನ್ನು, ಉದಾರದಾನಿಗಳನ್ನು, ಮಂತ್ರಿಗಳನ್ನು ಲೋಕದಲ್ಲಿ **"ಧೀರರು"** ಎಂದು ಕರೆಯುತ್ತಾರೆ. ಇದನ್ನು ಸಮಾಜವು ಹೆಮ್ಮೆಯಿಂದ ಅನುಮೋದನೆಮಾಡುತ್ತದೆ ಕೂಡ.

ಆದರೆ, **ಇವರಾರೂ ವೇದಾಂತದಲ್ಲಿ ಧೀರರಲ್ಲ.** ಹಾಗಾದರೆ **ವೇದಾಂತದಲ್ಲಿ ಧೀರರು ಯಾರು? ಎಂಬ ಪ್ರಶ್ನೆಗೆ ಉತ್ತರವಾಗಿ ನಾನೀ ಪುಸ್ತಕವನ್ನು ಬರೆದಿರುತ್ತೇನೆ. ನಿವೃತ್ತಿಮಾರ್ಗದಲ್ಲಿ ಪ್ರವೃತ್ತರಾಗಿದ್ದು, ವಿವೇಕ ವೈರಾಗ್ಯ ಸಂಪನ್ನರಾಗಿ, ಸದಾ ವೇದಾಂತಾರ್ಥಾನುಸಂಧಾನಪರರಾಗಿ ಆತ್ಮನನ್ನು ತಿಳಿಯಲು ಬಯಸುವ ಮುಮುಕ್ಷುಗಳನ್ನೇ ನಾವಿಲ್ಲಿ ವೇದಾಂತದಲ್ಲಿ ಧೀರರು ಎಂದು ಕರೆಯುತ್ತೇವೆ. ಹೀಗೆಂದು ವೇದಾಂತಗಳಲ್ಲಿಯೇ ಅನೇಕ ಕಡೆಗಳಲ್ಲಿ ಹೇಳಿದ್ದಾರೆ.** ಲೋಕದಲ್ಲಿ ಧೀರರು **ಲಕ್ಷಗಟ್ಟಲೇ ಇರಬಹುದು. ಆದರೆ** ವೇದಾಂತದಲ್ಲಿ ಧೀರರು **ಕೇವಲ ನೂರಾರು ಜನಗಳಿರಬಹುದು.**

ಭಗವದನುಗ್ರಹದಿಂದ ಪ್ರಾಪ್ತವಾಗಿರುವ ಈ ಶ್ರೇಷ್ಠಮಾನವಜನ್ಮದಲ್ಲಿ ವೇದಾಂತಾಧ್ಯಯನದ ಮೂಲಕ, ಆತ್ಮಜ್ಞಾನವನ್ನು ಪಡೆದುಕೊಂಡು, ಈ ಭಯಂಕರ ಭವಸಾಗರದಿಂದ ಮುಕ್ತರಾಗಬೇಕೆನ್ನುವ ಮುಮುಕ್ಷುಸಾಧಕರೇ **"ವೇದಾಂತದಲ್ಲಿ ಧೀರರು"** ಎಂಬೀ ವಿಷಯಗಳನ್ನು **ವೇದಾಂತದಲ್ಲಿ ಧೀರರು"** ಎಂಬೀ ಗ್ರಂಥದಲ್ಲಿ ಬರೆದಿರುತ್ತೇನೆ. ಇದನ್ನು ತುಂಬು ಹೃದಯದಿಂದ, ತುಂಬು ಪ್ರೀತಿಯಿಂದ ಸುಂದರವಾಗಿ ಮುದ್ರಿಸಿಕೊಟ್ಟಿರುವ ನನ್ನ ಪ್ರೀತಿಯ ಶ್ರೀ ಬಿ. ಎನ್. ನಟರಾಜ್‌ರವರಿಗೆ ನನ್ನ ವಂದನೆಗಳು.

ಶ್ರೀ'ವಿಳಂಬಿ'ನಾಮಸಂವತ್ಸರದ
ಫಾಲ್ಗುಣ ಶುದ್ಧ ಹೋಳಿ ಹುಣ್ಣಿಮೆ
21-3-2019, ಗುರುವಾರ

ವೇದಾಂತಭಾಸ್ಕರ, ಮಹಾಮಹೋಪಾಧ್ಯಾಯ
**ಡಾ|| ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾ**
ಉತ್ತರಹಳ್ಳಿ, ಬೆಂಗಳೂರು-61

# "ವೇದಾಂತದಲ್ಲಿ ಧೀರರು" ಅಂತರಂಗ

# 1. ವೇದಾಂತದಲ್ಲಿ ಧೀರನು ಇವನು

ಲೋಕದಲ್ಲಿ ಕಷ್ಟಪಟ್ಟು ವಿದ್ಯಾವಂತನಾಗಿ ತುಂಬಾ ಹಣವನ್ನು ಸಂಪಾದಿಸಿದ್ದರೆ ಅಂಥವನನ್ನು '**ಧೀರ**' ಎನ್ನುತ್ತಾರೆ. ಆದರೆ ವೇದಾಂತದಲ್ಲಿ ವಿವೇಕಿಯಾದ ಮುಮುಕ್ಷುವನ್ನು **ಧೀರ** ಎನ್ನುತ್ತಾರೆ. ಅಂಥ **ಧೀರನು** ಹೇಗಿರುತ್ತಾನೆ? ಎಂದರೆ:

**ಅಸಾರಮ್ ಅಲ್ಪಸಾರಂ ಚ ಸಾರಂ ಸಾರತರಂ ತ್ಯಜೇತ್।**
**ಭಜೇತ್ ಸಾರತಮಂ ಶಾಸ್ತ್ರೇ ಏತದ್ಧೀರಸ್ಯ ಲಕ್ಷಣಮ್॥**

*ಅಸಾರವನ್ನೂ ಅಲ್ಪಸಾರವನ್ನೂ ಸಾರವನ್ನೂ ಸಾರತರವನ್ನೂ ಬಿಟ್ಟು ಯಾವಾತನು ಶಾಸ್ತ್ರದಲ್ಲಿ ಹೇಳಿರುವ ಸಾರತಮವಾದ ಮೋಕ್ಷವನ್ನೇ ಬಯಸುತ್ತಾನೆಯೋ ಮತ್ತು ಮೋಕ್ಷವನ್ನೇ ಹೊಂದುವ ಪ್ರಯತ್ನವನ್ನು ಶ್ರದ್ಧೆಯಿಂದ ಮಾಡುತ್ತಾನೆಯೋ ಅವನೇ ನಿಜವಾದ ಧೀರನು. ಈ ಶ್ಲೋಕದ ವಿವರಣೆಯನ್ನು ನೋಡೋಣ:*

**ಅಸಾರಂ ತ್ಯಜೇತ್:** ಅಸಾರವಾದುದ್ದನ್ನು ಬಿಟ್ಟುಬಿಡುತ್ತಾನೆ. ಅಸಾರ ವಸ್ತುಗಳೆಂದರೆ ಸಾರವಿಲ್ಲದ, ಪ್ರಯೋಜನವಿಲ್ಲದ, ಉಪಯೋಗವಿಲ್ಲದ ಪದಾರ್ಥಗಳನ್ನು ಧೀರನಾದ ಮುಮುಕ್ಷುಸಾಧಕನು ಸಂತೋಷದಿಂದ ಬಿಟ್ಟು ಬಿಡುತ್ತಾನೆ. ಉದಾಹರಣೆಗೆ: ಹಳೆಯ ಸ್ಟೀಲ್ ಪಾತ್ರೆಗಳು, ಹಳೇ ಚಾಪೆಗಳು. ಇವುಗಳಿಗೆ ಧೀರನು ಮಹತ್ತ್ವವನ್ನು ಕೊಡುವುದಿಲ್ಲ.

**ಅಲ್ಪಸಾರಂ ತ್ಯಜೇತ್:** ಸ್ವಲ್ಪವೇ ಸಾರವುಳ್ಳದ್ದನ್ನೂ ಧೀರನು ಬಿಟ್ಟು ಬಿಡುತ್ತಾನೆ. ಉದಾಹರಣೆಗೆ: ಅಲಂಕಾರದ ಬಟ್ಟೆಗಳು, ಬಾಹ್ಯಾಡಂಬರದ ಪದಾರ್ಥಗಳನ್ನು ಧೀರನು ಬಿಟ್ಟುಬಿಡುತ್ತಾನೆ.

**ಸಾರಂ ತ್ಯಜೇತ್:** ಸಾರವುಳ್ಳ ವಸ್ತುಗಳನ್ನೂ ಧೀರನು ಬಿಟ್ಟುಬಿಡುತ್ತಾನೆ. ಸಾರವುಳ್ಳ ವಸ್ತುಗಳೆಂದರೆ ಸ್ವಲ್ಪ ಪ್ರಯೋಜನವುಳ್ಳ ಪದಾರ್ಥಗಳು. ಉದಾ: ಆಸ್ತಿ, ಸೈಟು, ಮನೆ ಮಠ, ಚಿನ್ನ, ಬೆಳ್ಳಿ, ಹಣ, ಅಧಿಕಾರಗಳೆಲ್ಲವೂ ಮಾನವ ಜನ್ಮದಲ್ಲಿ ಸಾರವಾದ ವಸ್ತುಗಳು. ಧೀರನು ಇದರಲ್ಲಿಯೂ ಆಸಕ್ತನಾಗಿರುವುದಿಲ್ಲ.

**ಸಾರತರಂ ತ್ಯಜೇತ್:** ಹೆಚ್ಚು ಸಾರವುಳ್ಳ ವಸ್ತುಗಳನ್ನೂ ಧೀರನು ತ್ಯಜಿಸುತ್ತಾನೆ. ಮಂತ್ರಿಪದವೀ, ಸ್ವರ್ಗಲೋಕ, ವೈಕುಂಠ ಕೈಲಾಸ ಲೋಕಗಳು. ಇವುಗಳು ಸಾರತರವಾದ ವಸ್ತುಗಳು. ಇವುಗಳನ್ನು ಧೀರನಾದವನು ಬಿಟ್ಟುಬಿಡುತ್ತಾನೆ.

ಇವುಗಳನ್ನೆಲ್ಲ ಬಿಟ್ಟು ಧೀರನು ಏನನ್ನು ಅಪೇಕ್ಷಿಸುತ್ತಾನೆ? ಎಂದರೆ,

**ಭಜೇತ್ ಸಾರತಮಂ ಶಾಸ್ತ್ರೇ:** ವೇದಾಂತದಲ್ಲಿ ತಿಳಿಸಿರುವಂಥ ಮೋಕ್ಷವನ್ನೇ ಹೊಂದಲು ಪ್ರಯತ್ನಿಸುವವನೇ ಧೀರನು. ಬ್ರಹ್ಮಲೋಕದ ವರೆಗಿನ ಎಲ್ಲಾ ಫಲಗಳೂ ಅನಿತ್ಯವೇ ಆಗಿರುತ್ತವೆ ಎಂದು ತಿಳಿದವನೇ ಧೀರನು.

**ಅಸಾರ ಪದಾರ್ಥಗಳನ್ನು ತ್ಯಜಿಸಿದವನೇ ಧೀರನು**

## 2. ವಿವೇಕಿಯೇ ಧೀರ

ದೈವದತ್ತವಾದ ಬುದ್ಧಿಯಿಂದ ಗಟ್ಟಿ-ಜೊಳ್ಳನ್ನು ಬಿಡಿಸಿಕೊಳ್ಳುವವನೇ ಧೀರ ನೆನಿಸುತ್ತಾನೆ. ಕಣ್ಣುಗಳಿಗೆ ಕಂಡಕಂಡದ್ದನ್ನೆಲ್ಲ ಬಯಸುವವನು **ಮಂದ**ನಾದರೆ, ವಿವೇಕದಿಂದ ನಿತ್ಯ, ಶಾಶ್ವತ ಹಾಗೂ ಕೂಟಸ್ಥವಾದ ಸತ್ಯಫಲವನ್ನೇ ಬಯಸುವವನು **ಧೀರ** ಎನಿಸುತ್ತಾನೆ. ಕಾಠಕೋಪನಿಷತ್ತಿನಲ್ಲಿ ಹೀಗೆ ಹೇಳಿರುತ್ತದೆ:

**ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ**
**ತೌ ಸಂಪರೀತ್ಯ ವಿವಿನಕ್ತಿ ಧೀರಃ।**
**ಶ್ರೇಯೋ ಹಿ ಧೀರೋ ಅಭಿಪ್ರೇಯಸೋ ವೃಣೀತೇ**
**ಪ್ರೇಯೋ ಮಂದೋ ಯೋಗಕ್ಷೇಮಾದ್ ವೃಣೀತೇ॥**

**ಕಾಠಕೋಪನಿಷತ್ ೨-೨**

*ಶ್ರೇಯಸ್ಸು ಮತ್ತು ಪ್ರೇಯಸ್ಸು; ಇವೆರಡೂ ಮನುಷ್ಯನ ಹತ್ತಿರಕ್ಕೆ ಬರುತ್ತವೆ. ಈ ಎರಡನ್ನೂ **ಧೀರನು** ಮನಸ್ಸಿನಿಂದ ಚೆನ್ನಾಗಿ ವಿವೇಚಿಸಿಕೊಂಡು ಪ್ರೇಯಸ್ಸಿಗಿಂತಲೂ ಹೆಚ್ಚಾಗಿ ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಆದರೆ ಮಂದನು ಅಂದರೆ ದಡ್ಡನು, ಯೋಗಕ್ಷೇಮಕ್ಕಾಗಿ ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.*

ಮಾನವರ ಕಣ್ಣುಮುಂದೆ ಶ್ರೇಯಸ್ಸೂ ಇದೆ, ಪ್ರೇಯಸ್ಸೂ ಇದೆ. ಒಂದು ನಿವೃತ್ತಿಮಾರ್ಗ, ಮತ್ತೊಂದು ಪ್ರವೃತ್ತಿಮಾರ್ಗ; ಒಂದು ಮೋಕ್ಷಮಾರ್ಗ, ಮತ್ತೊಂದು ಅಭ್ಯುದಯಮಾರ್ಗ. ಪ್ರತಿಯೊಬ್ಬ ಮನುಷ್ಯನ ಮುಂದೆ ಈ ಎರಡು ಮಾರ್ಗಗಳಿವೆ. ಅಂದರೆ ಯಾವುದನ್ನು ಬೇಕಾದರೂ ಮನುಷ್ಯನು ಆರಿಸಿಕೊಳ್ಳಬಹುದು. ಏಕೆಂದರೆ ಇವೆರಡೂ ಮಾನವರಿಗೆ ಸ್ವಾಧೀನವೇ ಆಗಿರುತ್ತವೆ. **ಸತ್ಯಂ ಸ್ವಾಯತ್ತೇ, ತಥಾಪಿ ಸಾಧನತಃ ಫಲತಶ್ಚ ಮಂದಬುದ್ಧೀನಾಂ ದುರ್ವಿವೇಚನರೂಪೇ ಸತೀ ವ್ಯಾಮಿಶ್ರೀಭೂತೇ ಇವ**; ಹೌದು, ಇವೆರಡು ಮಾರ್ಗಗಳೂ ಪ್ರತಿಯೊಬ್ಬನಿಗೂ ಅವನ ಅಧೀನವಾಗಿಯೇ ಇರುತ್ತವೆ. ಆದರೆ ಸಾಧನದಿಂದಲೂ ಫಲದಿಂದಲೂ ಶ್ರೇಯಸ್ಸು-ಪ್ರೇಯಸ್ಸುಗಳನ್ನು ಮಂದಬುದ್ಧಿಯುಳ್ಳವರು ಸರಿಯಾಗಿ ವಿವೇಕದಿಂದ ಬಿಡಿಸಿಕೊಳ್ಳಲಾರರು.

ಆದರೆ ಧೀರನಾದ, ವಿವೇಕಿಯಾದ ಸಾಧಕನು ನೀರಿನಿಂದ ಹಾಲನ್ನು ಹಂಸವು ಬಿಡಿಸಿಕೊಳ್ಳುವಂತೆ, ಪ್ರೇಯಸ್ಸಿನಿಂದ ಶ್ರೇಯಸ್ಸನ್ನು ಬಿಡಿಸಿಕೊಂಡು ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. **ಆಲೋಚ್ಯ ಗುರುಲಾಘವಂ ವಿವಿನಕ್ತಿ ಪೃಥಕ್ಕರೋತಿ ಧೀರಃ ಧೀಮಾನ್**; ಬುದ್ಧಿವಂತನಾದ ಧೀರನು ಬುದ್ಧಿಯಿಂದ ವಿವೇಚಿಸಿ, ಬಿಡಿಸಿಕೊಂಡು ಪ್ರೇಯಸ್ಸನ್ನು ಬಿಟ್ಟು ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.

**ಮೋಕ್ಷವನ್ನೇ ಬಯಸುವವನು ಧೀರನು**

## 3. ಉಪಾಸಕರೂ ಕೃಪಣರೇ

ಸಚ್ಚಿದಾನಂದಸ್ವರೂಪನಾದ ಆತ್ಮನೇ ತಾನೆಂದು ತಿಳಿದವನೊಬ್ಬನೇ **ಧೀರ. ಆತ್ಮೈವೇದಂ ಸರ್ವಂ, ನೇಹ ನಾನಾಸ್ತಿ ಕಿಂಚನ**; ಇದೆಲ್ಲವೂ ಆತ್ಮನೊಬ್ಬನೇ ಆಗಿದೆ, ಆತ್ಮನಲ್ಲಿ ಸ್ವಲ್ಪವೂ ಭೇದವಿಲ್ಲ ಎಂಬ ನಿಶ್ಚಯಜ್ಞಾನವನ್ನು ಪಡೆದ ಬ್ರಹ್ಮನಿಷ್ಠನೊಬ್ಬನೇ ಧೀರನು. ಇನ್ನುಳಿದ ಕರ್ಮಿಗಳೂ ಉಪಾಸಕರೂ ಕೃಪಣರೇ ಆಗಿರುತ್ತಾರೆ. ಇದು ವೇದಾಂತದೃಷ್ಟಿಯಿಂದ ಆಡಿದ ಮಾತೆಂಬುದು ನೆನಪಿರಲಿ.

ಬ್ರಹ್ಮನಿಷ್ಠರೂ ಜೀವನ್ಮುಕ್ತರೂ ವೇದಾಂತಸಂಪ್ರದಾಯವಿದರೂ ಆದ ಶ್ರೀ ಗೌಡಪಾದಾಚಾರ್ಯರು ಧೈರ್ಯವಾಗಿ ಹೀಗೆ ಹೇಳಿದ್ದಾರೆ:

**ಉಪಾಸನಾಶ್ರಿತೋ ಧರ್ಮೋ ಜಾತೇ ಬ್ರಹ್ಮಣಿ ವರ್ತತೇ।**
**ಪ್ರಾಗುತ್ಪತ್ತೇರಜಂ ಸರ್ವಂ ತೇನಾಸೌ ಕೃಪಣಃ ಸ್ಮೃತಃ॥**

ಗೌಡಪಾದೀಯ ಕಾರಿಕಾ, ಅದ್ವೈತಪ್ರಕರಣ ೩-೧

*ಉಪಾಸನೆಯನ್ನೇ ಆಶ್ರಯಿಸಿರುವ ಜೀವಾತ್ಮನು ಜಾತಬ್ರಹ್ಮದಲ್ಲಿರುತ್ತಾನೆ. ಸೃಷ್ಟಿಗಿಂತ ಮುಂಚೆ ಎಲ್ಲವೂ ಅಜವಾದ ಬ್ರಹ್ಮವೇ ಆಗಿತ್ತು. ಆದರೆ ಈಗ ನಾನು ಹುಟ್ಟಿದ್ದೇನೆ, ಅಜಬ್ರಹ್ಮದಲ್ಲಿದ್ದೇನೆ ಎಂದು ತಿಳಿದಿರುವ ಇವನು* ***ಕೃಪಣನು*** *ಎನ್ನುತ್ತಾರೆ ಜ್ಞಾನಿಗಳು.*

ಇದು ಬ್ರಹ್ಮಜ್ಞಾನಿಪುಂಗವರಾದ ಶ್ರೀಗೌಡಪಾದಾಚಾರ್ಯರ ಧೀರವಾಣಿ. ಇದು ಅದ್ವೈತಪ್ರಕರಣದ ಮೊಟ್ಟಮೊದಲನೆಯ ಶ್ಲೋಕ. ಮುಂದಿನ ಭಾಗದಲ್ಲಿ ಶ್ರೀಗೌಡಪಾದಾಚಾರ್ಯರು ಅಜ, ಅದ್ವಯ, ಅಮೃತ ಬ್ರಹ್ಮವನ್ನು ತಿಳಿಸುತ್ತಾರೆ. ಹೀಗಾಗಿ ಜಾತಬ್ರಹ್ಮವಿದರಾದ ಉಪಾಸಕರನ್ನು ಇಲ್ಲಿ **ಕೃಪಣರು** ಎಂದು ಕರೆದಿದ್ದಾರೆ. ಜಾತಬ್ರಹ್ಮವಾದಿಗಳೆಲ್ಲರೂ ಕೂಡ ಇನ್ನೂ ದ್ವೈತದಲ್ಲಿಯೇ ಇರುವುದರಿಂದ ಇವರಿಗೆ **ಕೃಪಣರು** ಎಂದು ಹೆಸರು. ಕೃಪಣರು, ದೀನರು, ಮಂದರು, ಬಾಲಕರು—ಇವೆಲ್ಲವೂ ಪರ್ಯಾಯಪದಗಳೇ ಆಗಿರುತ್ತವೆ.

ಈಗ ಬ್ರಹ್ಮವು ಹುಟ್ಟಿರುತ್ತದೆ, ನಾನೂ ಬ್ರಹ್ಮದಿಂದಲೇ ಹುಟ್ಟಿರುತ್ತೇನೆ; ನಾನೀಗ ಈ ಬ್ರಹ್ಮವನ್ನು ಉಪಾಸನೆಮಾಡುತ್ತಾ ಇದ್ದು, ಮರಣಾನಂತರ ಅಜಾತ ಬ್ರಹ್ಮವನ್ನು ಸೇರಿಕೊಳ್ಳುತ್ತೇನೆಂದು ತಿಳಿದು ಬ್ರಹ್ಮವನ್ನು ಉಪಾಸನೆಮಾಡುವವನಿಗೆ **ಕೃಪಣನು** ಎಂದು ಹೆಸರು. ಏಕೆಂದರೆ ಇವನು ಈಗಲೂ ಅಜಾತಬ್ರಹ್ಮ ಸ್ವರೂಪನೇ ಆಗಿದ್ದರೂ ಅದನ್ನು ತಿಳಿಯದೇ ನಾನು ಉಪಾಸಕ, ಬ್ರಹ್ಮವು ಉಪಾಸ್ಯ, ಉಪಾಸನೆಯನ್ನು ಮಾಡಿ ಮರಣಾನಂತರ ನಾನು ಬ್ರಹ್ಮವನ್ನು ಸೇರಿ ಕೊಳ್ಳುತ್ತೇನೆ ಎಂದು ತಿಳಿದಿದ್ದಾನೆ. ಪರಿಪೂರ್ಣಬ್ರಹ್ಮವನ್ನು ತಿಳಿದವನೇ ಧೀರ, ಪರಿಚ್ಛಿನ್ನ ಬ್ರಹ್ಮವನ್ನು ಉಪಾಸನೆಮಾಡುವವನೇ ದೀನ ಅಥವಾ ಕೃಪಣನು.

**ಬ್ರಹ್ಮೋಪಾಸಕರಾದ ಮಾತ್ರಕ್ಕೆ ಅವರೇನೂ ಪರಿಪೂರ್ಣದರ್ಶಿಗಳಲ್ಲ**

# 4. ಮೃತ್ಯುಭಯವನ್ನು ಗೆದ್ದವನೇ ಧೀರ

ವೇದಾಂತದ ಧೀರನು ಸಮಾಜದ ಕಣ್ಣಿನಲ್ಲಿ ಬಡವನಾಗಿರಬಹುದು, ಕುರೂಪಿಯೂ ಆಗಿರಬಹುದು, ಅವಿವಾಹಿತನೂ ಆಗಿರಬಹುದು; ಆದರೆ ಇವನೇ ನಿಜವಾದ ಧೀರನು, ಏಕೆಂದರೆ ಇವನು ಮರಣಭಯವನ್ನು ಗೆದ್ದಿರುವ ವೀರ್ಯವನ್ನು ಆತ್ಮನಿಂದ ಹೊಂದಿರುತ್ತಾನೆ. ಧೀರನಾದ ಆತ್ಮಜ್ಞಾನಿಗೆ ಮರಣ ಭಯವೆಂಬುದು ಇರಲಾರದು. ಹಣ, ಅಧಿಕಾರ, ಅಂತಸ್ತು, ಕೀರ್ತಿ, ಸಂಪತ್ತು ಗಳಾವುದರಿಂದಲೂ ಮಾನವನು ಮೃತ್ಯುಭಯವನ್ನು ಗೆಲ್ಲಲಾರನು. ಆದರೆ ಆತ್ಮಜ್ಞಾನದಿಂದ ಧೀರನು ಮರಣಭಯವನ್ನು ಸುಲಭವಾಗಿ ಗೆದ್ದಿರುತ್ತಾನೆ.

ಇದನ್ನೇ ಕೇನಶ್ರುತಿಯು **ಆತ್ಮನಾ ವಿಂದತೇ ವೀರ್ಯಂ** ಎನ್ನುತ್ತಿದೆ.

**ಆತ್ಮವಿದ್ಯಯಾ ಅಮೃತತ್ವಂ ವಿಂದತೇ; ಆತ್ಮನಾ ಸ್ವೇನರೂಪೇಣ ಲಭತೇ ವೀರ್ಯಂ ಬಲಂ ಸಾಮರ್ಥ್ಯಮ್। ಧನ ಸಹಾಯ ಮಂತ್ರ ಔಷಧ ತಪೋಯೋಗಕೃತಂ ವೀರ್ಯಂ ಮೃತ್ಯುಂ ನ ಶಕ್ನೋತಿ ಅಭಿಭವಿತುಂ ಅನಿತ್ಯವಸ್ತುಕೃತತ್ವಾತ್; ಆತ್ಮವಿದ್ಯಾಕೃತಂ ತು ವೀರ್ಯಮ್ ಆತ್ಮನಾ ಏವ ವಿಂದತೇ, ನಾನ್ಯೇನ, ಇತ್ಯತಃ ಅನನ್ಯಸಾಧನತ್ವಾತ್ ಆತ್ಮವಿದ್ಯಾವೀರ್ಯಸ್ಯ ತದೇವ ವೀರ್ಯಂ ಮೃತ್ಯುಂ ಶಕ್ನೋತಿ ಅಭಿಭವಿತುಮ್।**

*ಆತ್ಮವಿದ್ಯೆಯಿಂದ ಅಮೃತತ್ವವನ್ನು ಹೊಂದುತ್ತಾನೆ. ಆತ್ಮನಿಂದ ಎಂದರೆ ತನ್ನಿಂದಲೇ ವೀರ್ಯವನ್ನು, ಬಲವನ್ನು ಹೊಂದುತ್ತಾನೆ; ಧನ, ಸಹಾಯ, ಮಂತ್ರ, ಔಷಧ, ತಪಸ್ಸು, ಯೋಗಗಳಿಂದ ಉಂಟಾದ ವೀರ್ಯಗಳಾವುವೂ ಮೃತ್ಯುವನ್ನು ಗೆಲ್ಲಲು ಸಾಧನಗಳಲ್ಲ ; ಏಕೆಂದರೆ ಈ ವೀರ್ಯಗಳೆಲ್ಲವೂ ಅನಿತ್ಯವಸ್ತುಗಳಿಂದಲೇ ಉಂಟಾ ಗಿರುವುದರಿಂದ; ಆದರೆ ಆತ್ಮವಿದ್ಯಾಕೃತವಾದ ವೀರ್ಯವಾದರೋ ಆತ್ಮನಿಂದಲೇ ಉಂಟಾಗಿರುತ್ತದೆ; ಇದು ಆತ್ಮನಿಂದಲೇ ಉಂಟಾಗಿರುವ ವೀರ್ಯವು. ಇದೊಂದೇ ಮೃತ್ಯುವನ್ನು ದೂರಮಾಡಬಲ್ಲದಾದ ವೀರ್ಯವಾಗಿರುತ್ತದೆ—ಎಂದು ಶಾಂಕರಭಾಷ್ಯ.*

ಇವನೊಬ್ಬನೇ ಧೀರ, ಉಳಿದವರೆಲ್ಲರೂ ದೀನರೇ ಆಗಿರುತ್ತಾರೆ. ಎಷ್ಟೇ ದೊಡ್ಡವನಾಗಿದ್ದರೂ ಅವನಿಗೆ ಮರಣಭಯವು ಇದ್ದೇ ಇರುತ್ತದೆ. ಏಕೆಂದರೆ ನಾನೇ ಶರೀರವೆಂದೂ, ನಾನು ಹುಟ್ಟಿದವನೆಂದೂ ಪ್ರತಿಯೊಬ್ಬ ಮಾನವನೂ ತಿಳಿದಿರುತ್ತಾನೆ. ಹುಟ್ಟಿದ ಮೇಲೆ ಮರಣವು ಇದ್ದೇ ಇರುತ್ತದೆ.

ಮರಣಭಯವನ್ನು ಆತ್ಮಜ್ಞಾನದಿಂದ ಗೆದ್ದಿರುವುದರಿಂದ ಇವನೊಬ್ಬನೇ ಧೀರನೆನಿಸುತ್ತಾನೆ. ಹೀಗಾಗಿ ಸಾಮಾನ್ಯ ಮಾನವರೂ ಆತ್ಮಜ್ಞಾನಿಗಳಾಗಿಬಿಟ್ಟರೆ ಅವರೂ ಧೀರರೇ ಆಗಿಬಿಡುತ್ತಾರೆ. ವೇದಾಂತಸಂದೇಶಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡರೆ ನಾವೆಲ್ಲರೂ ಧೀರರೇ ಆಗಿಬಿಡುತ್ತೇವೆ.

**ಆತ್ಮಜ್ಞಾನಿಯೊಬ್ಬನೇ ನಿಜವಾದ ಧೀರ**

# 5. ಅಮೃತತ್ವವೇ ಧೀರನ ಗುರಿ

**ವೇದಾಂತದಲ್ಲಿ ಧೀರನು** ಅಮೃತತ್ವವನ್ನು ಹೊಂದುತ್ತಾನೆ ಎಂದು ಹೇಳಿರುತ್ತದೆ. ಆತ್ಮಜ್ಞಾನದಿಂದಲೇ ಅಮೃತತ್ವಪ್ರಾಪ್ತಿ; ಕರ್ಮದಿಂದಾಗಲೀ, ಪ್ರಜೆಗಳಿಂದಾಗಲೀ, ಧನದಿಂದಾಗಲೀ ಅಮೃತತ್ವವು ದೊರಕದು.

ಸರಿ, ಹಾಗಾದರೆ ಆತ್ಮಜ್ಞಾನ ಎಂದರೇನು? ಹೇಗೆ ತಿಳಿದರೆ ಅದು ಆತ್ಮಜ್ಞಾನವಾದೀತು? ಎಂಬುದನ್ನು ಈ ಕೆಳಗಿನ ಮಂತ್ರವು ನಮಗೆ ತಿಳಿಸುತ್ತಿದೆ:

**ಪ್ರತಿಬೋಧವಿದಿತಂ ಮತಮ್ ಅಮೃತತ್ವಂ ಹಿ ವಿಂದತೇ।**
**ಆತ್ಮನಾ ವಿಂದತೇ ವೀರ್ಯಂ ವಿದ್ಯಯಾ ವಿಂದತೇಽಮೃತಮ್॥**

ಕೇನೋಪನಿಷತ್ ೨-೪

*ಆತ್ಮನನ್ನು ಪ್ರತಿಬೋಧನೆಂದು ತಿಳಿದಾಗಲೇ ಅದು ಆತ್ಮಜ್ಞಾನವೆನಿಸುತ್ತದೆ. ಆದರಿಂದ ಅಮೃತತ್ವವನ್ನು ಹೊಂದುತ್ತಾನೆ. ಆತ್ಮನಿಂದ ವೀರ್ಯವನ್ನು ಹೊಂದುತ್ತಾನೆ, ಆತ್ಮವಿದ್ಯೆಯಿಂದ ಅಮೃತವನ್ನು ಹೊಂದುತ್ತಾನೆ.*

ಆತ್ಮನನ್ನು **ಪ್ರತಿಬೋಧನೆಂದು** ತಿಳಿದವನೇ ಧೀರ, ಅಮೃತತ್ವವನ್ನೇ ಹೊಂದಿದವನು ಧೀರ. ಪ್ರತಿಬೋಧನೆಂದರೆ ಏನರ್ಥ? ನೋಡೋಣ:

**ಬೋಧಂ ಬೋಧಂ ಪ್ರತಿ ಪ್ರತಿಬೋಧಂ; ಸರ್ವ ಬೌದ್ಧಪ್ರತ್ಯಯಸಾಕ್ಷೀ ಇತ್ಯರ್ಥಃ,** ಬುದ್ಧಿಯ ಪ್ರತ್ಯಯಗಳನ್ನೆಲ್ಲ ಬೆಳಗುತ್ತಿರುವವನೇ ಆತ್ಮನೆಂದು ತಿಳಿದರೆ ಅದಕ್ಕೇ ಆತ್ಮಜ್ಞಾನ ಎಂದು ಹೆಸರು. ಮನಸ್ಸಿನಲ್ಲಿ ನೂರಾರು ಪ್ರತ್ಯಯಗಳು ಏಳುತ್ತಲೂ ನಾಶವಾಗುತ್ತಲೂ ಇರುತ್ತವೆ. ಇವುಗಳಾವುವೂ ತಾನಲ್ಲವೆಂದೂ, ಈ ಪ್ರತ್ಯಯಗಳನ್ನೆಲ್ಲ ಬೆಳಗುತ್ತಿರುವ ಸಾಕ್ಷಿಯೇ ತಾನೆಂದೂ ತಿಳಿದವನೇ ಧೀರನು.

ಇಷ್ಟೇ ತಾನೇ? ಇದೇನು ಮಹಾ? ಎಂದು ತಿಳಿಯಬಾರದು. ಏಕೆಂದರೆ ಪ್ರತಿಯೊಬ್ಬ ಮನುಷ್ಯನೂ ಮನಸ್ಸನ್ನೇ ತಾನೆಂದು ತಿಳಿದುಕೊಂಡು, ಮನಸ್ಸಿನ ಧರ್ಮಗಳಾದ ಸುಖ ದುಃಖ, ರಾಗ ದ್ವೇಷ, ಭಯ ಆಶ್ಚರ್ಯ, ಕಾಮ ಕ್ರೋಧಾದಿಗಳನ್ನು ತನ್ನ ಮೇಲೆ ಹಾಕಿಕೊಂಡೇ ವ್ಯವಹಾರ ಮಾಡುತ್ತಾನೆ. ಇದಕ್ಕೇ **ಮಿಥ್ಯಾಜ್ಞಾನ** ಎಂದು ಹೆಸರು. ತಾನಲ್ಲದ ಮನೋವೃತ್ತಿಗಳನ್ನೆಲ್ಲ ತಾನೆಂದು ತಿಳಿದವನು ದಡ್ಡನೆನಿಸುತ್ತಾನೆ. ಇಂಥವನು ದೀನನೇ ಹೊರತು ಧೀರನಲ್ಲ.

ಆದರೆ ಧೀರನಾದ ಮುಮುಕ್ಷುಸಾಧಕನು ಬ್ರಹ್ಮವೆಂದರೆ ತಾನೇ ಎಂದೂ ತಾನೆಂದರೆ ಬ್ರಹ್ಮವೇ ಎಂದೂ ತಿಳಿದಿರುತ್ತಾನೆ. **ಪ್ರತ್ಯಯಪ್ರತ್ಯಗಾತ್ಮತಯಾ ಯದಾ ಬ್ರಹ್ಮ ವಿದಿತಂ ತದಾ ಬ್ರಹ್ಮ ವಿದಿತಂ ಭವತಿ, ತದೇವ ಸಮ್ಯಗ್ ದರ್ಶನಮ್; ತೇನ ಅಮೃತತ್ವಂ ವಿಂದತೇ ಧೀರಃ** ಎಂದು ಶಂಕರರ ಭಾಷ್ಯ.

**ಮೋಕ್ಷಫಲವನ್ನೇ ಬಯಸುವವನು ಧೀರನೆನಿಸುತ್ತಾನೆ**

# 6. ಧೀರನಿಗೆ ಶೋಕವಿಲ್ಲ

ವೇದಾಂತಗಳಲ್ಲಿ ಆತ್ಮಜ್ಞಾನಿಯೊಬ್ಬನೇ **ಧೀರನೆಂದೂ**, ಉಳಿದವರೆಲ್ಲರೂ ಬಾಲರೆಂದೂ ಹೇಳಿರುತ್ತದೆ. ಆತ್ಮನನ್ನೇ ತಾನೆಂದು ತಿಳಿಯುವುದು ಸಾಮಾನ್ಯರಿಗೆ ಸುಲಭವಲ್ಲ. ಏಕೆಂದರೆ ಸಾಮಾನ್ಯವಾಗಿ ದೇಹಾದಿಗಳನ್ನೇ ತಾನೆಂದು ಎಲ್ಲರೂ ತಿಳಿದಿರುತ್ತಾರೆ. ದೇಹೇಂದ್ರಿಯ ಮನೋ ಬುದ್ಧಿ ಪ್ರಾಣಗಳೂ ಅನಾತ್ಮವೇ ಎಂದು ತಿಳಿದ ಧೀರನಿಗೆ ಶೋಕಮೋಹಗಳಿಲ್ಲ ಎಂದು ವೇದಾಂತಗಳು ಮತ್ತೆ ಮತ್ತೆ ಹೇಳುತ್ತಿವೆ. ಕಾಠಕೋಪನಿಷತ್ತಿನ ಈ ಕೆಳಗಿನ ಮಂತ್ರವೊಂದನ್ನು ನೋಡೋಣ:

**ತಂ ದುರ್ದರ್ಶಮ್ ಗೂಢಮನುಪ್ರವಿಷ್ಟಂ**
**ಗುಹಾಹಿತಂ ಗಹ್ವರೇಷ್ಠಂ ಪುರಾಣಮ್।**
**ಅಧ್ಯಾತ್ಮಯೋಗಾಧಿಗಮೇನ ದೇವಂ**
**ಮತ್ವಾ ಧೀರೋ ಹರ್ಷಶೋಕೌ ಜಹಾತಿ॥**

ಕಾಠಕೋಪನಿಷತ್ ೨-೧೨

*ಆತ್ಮನು ದುರ್ದರ್ಶನೂ ಸೂಕ್ಷ್ಮನೂ ಆಗಿದ್ದು, ಗುಹಾಹಿತನೂ ಆಗಿರುತ್ತಾನೆ. ಗೂಢವಾಗಿ ಅನುಪ್ರವಿಷ್ಟನೂ ಆಗಿರುತ್ತಾನೆ. ಇವನನ್ನು ಎಲ್ಲರೂ ಅರಿಯಲಾರರು. ಆದರೆ ಧೀರರಾದ ಸಾಧಕರು ಈ ಆತ್ಮನನ್ನು ಅಧ್ಯಾತ್ಮಯೋಗದಿಂದ ಕಾಣುತ್ತಾರೆ. ಆತ್ಮನನ್ನು ತಿಳಿದ ಧೀರನು ಹರ್ಷವನ್ನೂ ಶೋಕವನ್ನೂ ಮೀರಿ ಹೋಗುತ್ತಾನೆ.*

ಈ ಆತ್ಮನು ಅನಾತ್ಮವಿಷಯಗಳ ವಾಸನೆಗಳಿಂದ ಮುಚ್ಚಲ್ಪಟ್ಟಿರುತ್ತಾನೆ. ಆತ್ಮನು ಸ್ವತಃ ಸ್ವಯಂಪ್ರಕಾಶಸ್ವರೂಪನೇ ಆಗಿದ್ದರೂ ಆ ಆತ್ಮನನ್ನು ಅನಾತ್ಮ ವಿಷಯವಾಸನೆಗಳು ಕಾಣದಂತೆ ಮಾಡಿರುತ್ತವೆ. ಹೀಗಾಗಿ ಹೊರಗಿನ ವಿಷಯ ಗಳನ್ನೇ ಕಾಣುತ್ತಿರುವವರಿಗೆ ಒಳಗಿನ ಆತ್ಮನು ಕಾಣದಂತಾಗುತ್ತದೆ. ಆತ್ಮನು ಗುಹಾಹಿತನೂ ಆಗಿರುತ್ತಾನೆ. ಮನಸ್ಸಿಗೂ ಮನಸ್ಸಾಗಿ, ಮನಸ್ಸಿನ ಪ್ರತ್ಯಯ ಗಳನ್ನೆಲ್ಲ ಆತ್ಮನೇ ಬೆಳಗುತ್ತಾ ಇದ್ದಾನೆ. ಆತ್ಮನು ದೇಹಕ್ಕಿಂತಲೂ, ಇಂದ್ರಿಯ ಗಳಿಗಿಂತಲೂ, ಮನಸ್ಸಿಗಿಂತಲೂ, ಬುದ್ಧಿಗಿಂತಲೂ ಇನ್ನೂ ಒಳಗಡೆ ಇರುತ್ತಾನೆ. ಹೀಗಾಗಿ ಇಂಥ ಆತ್ಮನನ್ನು ಎಲ್ಲರೂ ಸುಲಭವಾಗಿ ಕಾಣುವುದಕ್ಕಾಗುವುದಿಲ್ಲ.

ಇದು ಸಾಮಾನ್ಯ ಜನಗಳ ವಿಷಯವಾಯಿತು. ಆದರೆ ಧೀರರಾದ ಸಾಧಕರು ಕೆಲವರಿದ್ದಾರೆ. ಅವರು ಅಧ್ಯಾತ್ಮಯೋಗದಿಂದ ಇಂಥ ಸೂಕ್ಷ್ಮನಾದ ಪ್ರತ್ಯಗಾತ್ಮನನ್ನು ಸುಲಭವಾಗಿ ಕಾಣುತ್ತಾರೆ. **ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸಃ ಆತ್ಮನಿ ಸಮಾಧಾನಂ ಅಧ್ಯಾತ್ಮಯೋಗಃ**, ಅಧ್ಯಾತ್ಮಯೋಗದಿಂದ ಆತ್ಮನನ್ನು ಕಾಣುವ ಧೀರನಿಗೆ ಶೋಕವಾಗಲೀ ಮೋಹವಾಗಲೀ ಇರುವುದಿಲ್ಲ.

**ಧೀರನು ಆತ್ಮಜ್ಞಾನದಿಂದಲೇ ಶೋಕಮೋಹಗಳನ್ನು ಮೀರಿಹೋಗುತ್ತಾನೆ**

# 7. ವೇದಾಂತದ ಒಗಟನ್ನು ಬಲ್ಲ ಧೀರ!

ಪ್ರತಿಯೊಂದು ಕ್ಷೇತ್ರದಲ್ಲಿಯೂ ಒಂದೊಂದು ರೀತಿಯ ಒಗಟುಗಳು ಇರುತ್ತವೆ. ಇದನ್ನು ಧೀರರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು. ಹೀಗೆಯೇ ವೇದಾಂತದಲ್ಲಿ ನೂರಾರು ಒಗಟುಗಳಿರುತ್ತವೆ. ಇದು ಸಾಮಾನ್ಯಪಂಡಿತರಿಗೆ ಅರ್ಥವಾಗುವುದಿಲ್ಲ. ವೇದಾಂತದ ಧೀರರಿಗೆ ಮಾತ್ರವೇ ವೇದಾಂತದ ಒಗಟುಗಳು ಅರ್ಥವಾಗುತ್ತವೆ. ಇಲ್ಲೊಂದು ಅಂಥ ಒಗಟಿನ ಮಾತನ್ನು ನೋಡೋಣ:

**ಯಸ್ಯಾಮತಂ ತಸ್ಯ ಮತಂ, ಮತಂ ಯಸ್ಯ ನ ವೇದ ಸಃ।**
**ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್॥** ಕೇನ ೨-೩

*ಬ್ರಹ್ಮವು ಯಾರಿಗೆ ಅಮತವೋ, ಅವರಿಗೇ ಮತವಾಗಿರುತ್ತದೆ; ಯಾವನಿಗೆ ಬ್ರಹ್ಮವು ಮತವೋ ಅವನು ಬ್ರಹ್ಮವನ್ನು ತಿಳಿಯನು. ವಿಶೇಷವಾಗಿ ಬ್ರಹ್ಮವನ್ನು ತಿಳಿದವನಿಗೆ ಬ್ರಹ್ಮವು ತಿಳಿದಿಲ್ಲ, ಚೆನ್ನಾಗಿ ತಿಳಿಯದವರಿಗೆ ಬ್ರಹ್ಮವು ವಿಜ್ಞಾತವಾಗಿದೆ.*

ಈ ಮಂತ್ರದಲ್ಲಿ ಬ್ರಹ್ಮವನ್ನು ತಿಳಿದವರಿಗೆ ಬ್ರಹ್ಮವು ತಿಳಿದಿಲ್ಲವೆಂದೂ, ತಿಳಿಯದವರಿಗೆ ಬ್ರಹ್ಮವು ತಿಳಿದಿದೆಯೆಂದೂ ಹೇಳಿದೆ. ಇದು ಅತ್ಯಂತ ವಿರುದ್ಧವಾದ ಮಾತುಗಳಲ್ಲವೇ? ತಿಳಿದರೆ ತಿಳಿದಿಲ್ಲವೆಂದೂ, ತಿಳಿಯದಿದ್ದರೆ ತಿಳಿದಿದೆಯೆಂದೂ ಈ ಮಂತ್ರದಲ್ಲಿ ಹೇಳಿದೆ. ಧೀರರಿಗೆ ಮಾತ್ರವೇ ಈ ಸಂದೇಶವು ಅರ್ಥವಾಗಬೇಕೇ ಹೊರತು ಶುಷ್ಕ ಪಂಡಿತರಿಗೆ ಅರ್ಥವಾಗದು.

ಸರಿ, ಹಾಗಾದರೆ ಈ ಮಂತ್ರಕ್ಕೆ ಏನರ್ಥ? ಎಂಬುದನ್ನು ನೋಡೋಣ: ಬ್ರಹ್ಮವು ನಾಮರೂಪಗಳಿಂದ ಕೂಡಿದ ವಸ್ತುವಲ್ಲ, ಒಂದು ದ್ರವ್ಯವೂ ಅಲ್ಲ. ಏಕೆಂದರೆ ಬ್ರಹ್ಮಕ್ಕೆ ಗುಣಧರ್ಮಗಳಾವುವೂ ಇಲ್ಲ, ಬ್ರಹ್ಮವು ನಮಗಿಂತ ಭಿನ್ನ ಪದಾರ್ಥವೇ ಅಲ್ಲ. ಪರಬ್ರಹ್ಮವೆಂದರೆ ತಿಳಿಯುವವನ ಆತ್ಮನೇ ಆಗಿರುತ್ತದೆ. ಹೀಗೆ ವಿಷಯವೇ ಅಲ್ಲದ ಬ್ರಹ್ಮವನ್ನು ಯಾವಾತನು ವಿಷಯಮಾಡಿಕೊಂಡು ತನಗಿಂತ ಭಿನ್ನವಾಗಿ ತಿಳಿಯುತ್ತಾನೆಯೋ ಅವನಿಗೆ ಬ್ರಹ್ಮವು ತಿಳಿದಿಲ್ಲವೆಂದೇ ಹೇಳಬೇಕು. ಸಮುದ್ರವನ್ನೂ, ಬೆಟ್ಟವನ್ನೂ, ನಕ್ಷತ್ರಗಳನ್ನೂ, ಗ್ರಹಗಳನ್ನೂ ತನಗಿಂತ ಭಿನ್ನವಾಗಿ ತಿಳಿಯುತ್ತೇವೆ. ಏಕೆಂದರೆ ಇವೆಲ್ಲವೂ ಅನಾತ್ಮದ್ರವ್ಯಗಳು.

ಆದರೆ ಪರಬ್ರಹ್ಮವು ದ್ರವ್ಯವೂ ಅಲ್ಲ, ಅನಾತ್ಮವಸ್ತುವೂ ಅಲ್ಲ. ಇದನ್ನು ಅನಾತ್ಮವಸ್ತುಗಳಂತೆ ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಪರಬ್ರಹ್ಮವನ್ನು ತನ್ನ ನಿಜಸ್ವರೂಪವೇ ಎಂದೇ ತಿಳಿಯಬೇಕು. ಹೀಗೆ ತಿಳಿದವನಿಗೇ ಬ್ರಹ್ಮವು ತಿಳಿದಿದೆ ಎಂದು ತಿಳಿಯಬೇಕು. ವೇದಾಂತದಲ್ಲಿ ಧೀರನಾದವನು ಮಾತ್ರವೇ ಹೀಗೆ ಬ್ರಹ್ಮವನ್ನು ತಿಳಿಯಬಲ್ಲನೇ ಹೊರತು ಇತರರು ಯಾರೂ ತಿಳಿಯಲಾರರು.

**ತಾನೇ ಬ್ರಹ್ಮವೆಂದು ಬಲ್ಲವನೇ ಧೀರನು**

## 8. ಕೋಟಿಗೆ ಒಬ್ಬನೇ ಧೀರ!

ಮನುಷ್ಯರೆಲ್ಲರೂ ಬಹಳ ಮಟ್ಟಿಗೆ ಬಹಿರ್ಮುಖರಾಗಿಯೇ ಇರುತ್ತಾರೆ. ಇವರಿಗೆ ಹೊರಗಿನ ವಿಷಯಗಳಲ್ಲಿಯೇ ಆಸಕ್ತಿಯು ಇರುತ್ತದೆಯೇ ಹೊರತು ಒಳಗಿನ ಆತ್ಮನನ್ನು ತಿಳಿಯುವ ವಿಷಯದಲ್ಲಿ ಆಸಕ್ತಿಯು ಇರುವುದಿಲ್ಲ. ಆದರೆ ಲಕ್ಷಕ್ಕೆ ಒಬ್ಬನಂತೆ, ಕೋಟಿ ಮಾನವರಿಗೆ ಒಬ್ಬನಂತೆ ಧೀರನು ಇರುತ್ತಾನೆ. ಇವನಿಗೆ ಪ್ರತ್ಯಗಾತ್ಮನನ್ನೇ ತಿಳಿದುಕೊಂಡು ಆತ್ಮಜ್ಞಾನಿಯಾಗಬೇಕೆಂಬ ತೀವ್ರೇಚ್ಛೆಯು ಇರುತ್ತದೆ, ಆದರಿಂದ ಇವನು ಅಮೃತತ್ವವನ್ನೂ ಹೊಂದುತ್ತಾನೆ. ಹೀಗೆಂದು ಕಾಠಕೋಪನಿಷತ್ತಿನ ಈ ಮಂತ್ರವು ಹೇಳುತ್ತದೆ:

**ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ**
**ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್।**
**ಕಶ್ಚಿದ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್**
**ಆವೃತ್ತಚಕ್ಷುರಮೃತತ್ವಮಿಚ್ಛನ್॥** ಕಠೋಪನಿಷತ್ ೪-೧

*ಪರಮೇಶ್ವರನು ಇಂದ್ರಿಯಗಳನ್ನು ಬಹಿರ್ಮುಖವಾಗಿರುವಂತೆಯೇ ಸೃಷ್ಟಿಸಿದ್ದಾನೆ. ಆದ್ದರಿಂದ ಪ್ರತಿಯೊಬ್ಬ ಮಾನವನೂ ಹೊರಗಡೆಯಲ್ಲಿಯೇ ನೋಡುತ್ತಾನೆಯೇ ಹೊರತು ತನ್ನೊಳಗಡೆಯಲ್ಲಿ ನೋಡುತ್ತಿಲ್ಲ. ಆದರೆ ಲಕ್ಷಕ್ಕೆ ಅಥವಾ ಕೋಟಿಗೆ ಒಬ್ಬನಂತೆ ಧೀರನು ತನ್ನ ಇಂದ್ರಿಯಗಳನ್ನು ಒಳಮುಖಿಗಳನ್ನಾಗಿ ಮಾಡಿಕೊಂಡು, ಅಮೃತತ್ವವನ್ನೇ ಬಯಸುವವನಾಗಿ ತನ್ನ ಪ್ರತ್ಯಗಾತ್ಮನನ್ನೇ ಕಾಣುತ್ತಾನೆ.*

ಈ ಮಂತ್ರದಲ್ಲಿ **ಕಶ್ಚಿದ್ ಧೀರಃ** ಎಂದು ಹೇಳಿರುವುದನ್ನು ನಾವುಗಳು ಗಮನಿಸಬೇಕು. ಸಾಮಾನ್ಯವಾಗಿ ಪ್ರತಿಯೊಬ್ಬ ಮನುಷ್ಯನೂ ಹೊರಗಿರುವ ಶಬ್ದಾದಿ ಅನಾತ್ಮವಿಷಯಗಳನ್ನೇ ನೋಡುತ್ತಾ, ಅನಾತ್ಮರತನಾಗಿರುತ್ತಾನೆ. ಏಕೆಂದರೆ ಇಂದ್ರಿಯಗಳ ರಚನೆಯೇ ಬಹಿರ್ಮುಖವಾಗಿರುತ್ತದೆ. ಕಣ್ಣುಗಳಿಂದ ರೂಪವನ್ನೂ, ಕಿವಿಗಳಿಂದ ಶಬ್ದವನ್ನೂ, ನೋಡುತ್ತಾ ಕೇಳುತ್ತಾ ಅದರಿಂದಲೇ ಆನಂದವನ್ನು ಕಾಣುವುದೇ ಪ್ರತಿಯೊಬ್ಬನಿಗೂ ಸ್ವಭಾವವಾಗಿಬಿಟ್ಟಿರುತ್ತದೆ.

ಆದರೆ, ಇದರಿಂದ ಶಾಶ್ವತವಾದ ಆನಂದವು ಅಂದರೆ ಅಮೃತತ್ವವು ದೊರಕದು ಎಂಬುದನ್ನು ತಿಳಿದ ಧೀರನು ಮಾತ್ರ, ತನ್ನೊಳಗಡೆಗೆ ಹೋಗಿ ಅಲ್ಲಿರುವ ಆತ್ಮನನ್ನೇ ಕಾಣುತ್ತಾನೆ. ಇವನೇ ಧೀರನಾದ ಮುಮುಕ್ಷುವು. ಇಂದ್ರಿಯ ಮನೋಬುದ್ಧಿಗಳನ್ನೂ ಬೆಳಗುತ್ತಿರುವ ಸಾಕ್ಷಿಸ್ವರೂಪನಾದ ಆತ್ಮನೇ ತಾನೆಂದು ತಿಳಿದುಕೊಂಡು ಈ ಧೀರನು ಅಮೃತತ್ವವನ್ನೇ ಅಂದರೆ ಮೋಕ್ಷವನ್ನೇ ಹೊಂದುತ್ತಾನೆ. ಹೀಗಾಗಿ ಇವನೇ ಧೀರನು! ಇಂಥವನು ಕೋಟಿಗೊಬ್ಬನಂತೆ ಇರುತ್ತಾನೆ.

**ಪ್ರತ್ಯಗಾತ್ಮನನ್ನೇ ಕಾಣಬಯಸುವವನೇ ಧೀರನೆನಿಸುತ್ತಾನೆ**

# 9. ಧೀರರಿಗೆ ಶಂಕರರ ಸಪ್ತಸಂದೇಶಗಳು

ಶಂಕರರು ಧೀರರಿಗೆ ಎಚ್ಚರಿಕೆಯ ಏಳು ಗಂಟೆಗಳನ್ನು ಬಾರಿಸಿರುತ್ತಾರೆ:

**ಮಾತಾ ನಾಸ್ತಿ ಪಿತಾ ನಾಸ್ತಿ ನಾಸ್ತಿ ಬಂಧುಃ ಸಹೋದರಃ।**
**ಅರ್ಥಂ ನಾಸ್ತಿ ಗೃಹಂ ನಾಸ್ತಿ 'ತಸ್ಮಾತ್ ಜಾಗ್ರತ ಜಾಗ್ರತ' ॥ ೧॥**

*ನಿಜವಾಗಿ ತಾಯಿ, ತಂದೆ, ಬಂಧು, ಸಹೋದರ, ಹಣ, ಮನೆ ಯಾವುದೂ ಸತ್ಯವಲ್ಲ. ಆದ್ದರಿಂದ ಹುಷಾರಾಗಿರಿ, ಎಚ್ಚರಿಕೆ, ಎಚ್ಚರಿಕೆ!!*

**ಜನ್ಮ ದುಃಖಂ ಜರಾ ದುಃಖಂ ಜಾಯಾ ದುಃಖಂ ಪುನಃ ಪುನಃ।**
**ಸಂಸಾರಸಾಗರಂ ದುಃಖಂ 'ತಸ್ಮಾತ್ ಜಾಗ್ರತ ಜಾಗ್ರತ' ॥ ೨॥**

*ಜನ್ಮವೂ ದುಃಖವೇ, ಮುಪ್ಪೂ ದುಃಖವೇ, ಪತ್ನಿಯೂ ದುಃಖವೇ; ಇಷ್ಟೇ ಏಕೆ? ಸಂಸಾರಸಾಗರವೇ ದುಃಖ; ನೆನಪಿರಲಿ ಎಚ್ಚರಿಕೆ, ಎಚ್ಚರಿಕೆ!!*

**ಕಾಮಃ ಕ್ರೋಧಶ್ಚ ಲೋಭಶ್ಚ ದೇಹೇ ತಿಷ್ಠಂತಿ ತಸ್ಕರಾಃ।**
**ಜ್ಞಾನರತ್ನಾಪಹಾರಾಯ 'ತಸ್ಮಾತ್ ಜಾಗ್ರತ ಜಾಗ್ರತ' ॥ ೩॥**

*ಕಾಮಕ್ರೋಧಲೋಭಗಳೆಂಬ ಕಳ್ಳರು ನಿಮ್ಮೊಳಗೇ ಇರುವ ಜ್ಞಾನರತ್ನವನ್ನು ಅಪಹರಿಸುವುದಕ್ಕಾಗಿ ಹೊಂಚುಹಾಕುತ್ತಿದ್ದಾರೆ. ಎಚ್ಚರಗೊಳ್ಳಿರಿ, ಎಚ್ಚರಗೊಳ್ಳಿರಿ!!*

**ಆಶಯಾ ಬಧ್ಯತೇ ಲೋಕಃ ಕರ್ಮಣಾ ಬಹುಚಿಂತಯಾ।**
**ಆಯುಃ ಕ್ಷೀಣಂ ನ ಜಾನಾತಿ 'ತಸ್ಮಾತ್ ಜಾಗ್ರತ ಜಾಗ್ರತ' ॥ ೪॥**

*ಆಶೆಯಿಂದ ಕರ್ಮದಿಂದ ಚಿಂತೆಯಿಂದ ಮನುಷ್ಯನು ಬದ್ಧನಾಗಿರುತ್ತಾನೆ. ಆಯುಷ್ಯವು ಸವೆಯುತ್ತಿದ್ದರೂ ಆದನ್ನು ಗಮನಿಸುತ್ತಿಲ್ಲ. ಎಚ್ಚರಿಕೆ, ಎಚ್ಚರಿಕೆ!!*

**ಸಂಪದಃ ಸ್ವಪ್ನಸಂಕಾಶಾಃ ಯೌವನಂ ಕುಸುಮೋಪಮಮ್।**
**ವಿದ್ಯುಚ್ಚಂಚಲಮಾಯುಷ್ಯಮ್ 'ತಸ್ಮಾತ್ ಜಾಗ್ರತ ಜಾಗ್ರತ' ॥ ೫॥**

*ಸಂಪತ್ತುಗಳು ಸ್ವಪ್ನಸಮಾನ, ಯೌವನವು ಹೂವಿನಂತೆ ಬಾಡುತ್ತಿದೆ, ಆಯುಷ್ಯವಂತೂ ಮಿಂಚಿನಂತೆ ಹಾರಿಹೋಗುತ್ತಿದೆ. ಎಚ್ಚರಿಕೆ, ಎಚ್ಚರಿಕೆ!!*

**ಕ್ಷಣಂ ವಿತ್ತಂ ಕ್ಷಣಂ ಚಿತ್ತಂ ಕ್ಷಣಂ ಜೀವಿತಮೇವ ಚ।**
**ಯಮಸ್ಯ ಕರುಣಾ ನಾಸ್ತಿ 'ತಸ್ಮಾತ್ ಜಾಗ್ರತ ಜಾಗ್ರತ' ॥ ೬॥**

*ವಿತ್ತ , ಚಿತ್ತ , ಜೀವಿತ ಎಲ್ಲವೂ ಕ್ಷಣಿಕ. ಯಮನಿಗೆ ದಯೆಯೆಂಬುದಿಲ್ಲ.*

**ಅನಿತ್ಯಾನಿ ಶರೀರಾಣಿ ವಿಭವಾ ನೈವ ಶಾಶ್ವತಾಃ।**
**ನಿತ್ಯಂ ಸಂನಿಹಿತೋ ಮೃತ್ಯುಃ 'ತಸ್ಮಾತ್ ಜಾಗ್ರತ ಜಾಗ್ರತ' ॥ ೭॥**

*ದೇಹಗಳು ಅನಿತ್ಯ, ಸಂಪತ್ತೆಲ್ಲವೂ ಅಶಾಶ್ವತ, ಮರಣವು ಹತ್ತಿರದಲ್ಲಿದೆ. ಎಚ್ಚರಿಕೆ!*

# 10. ದೇವಲೋಕಗಳೂ ಅಸುರಲೋಕಗಳೇ

ವೇದಾಂತಗಳ ಪ್ರಕಾರ ಆತ್ಮಜ್ಞಾನಿಯೊಬ್ಬನೇ **ಧೀರ**! ಪರಮಪುರುಷಾರ್ಥವೆಂಬ ಮೋಕ್ಷವನ್ನು ಹೊಂದಲು ಪ್ರಯತ್ನಿಸುವ ಸಾಧಕನೇ **ಧೀರ**. ಆತ್ಮಜ್ಞಾನದ ಬಲದಿಂದ ಮೋಕ್ಷವನ್ನು ಹೊಂದಿದವನೇ **ಧೀರನು**. ಉಳಿದವರು ಎಷ್ಟೇ ದೊಡ್ಡವರಾಗಿದ್ದರೂ, ದೇವತೆಗಳೇ ಆಗಿದ್ದರೂ ಅವರು ವೇದಾಂತದಲ್ಲಿ ಧೀರರಲ್ಲ. ಸ್ವರ್ಗಲೋಕವೇ ಆದರೂ ಅದು ಮೋಕ್ಷವಲ್ಲ. ಈ ಮೋಕ್ಷಫಲವನ್ನು ಹೊಂದದ ದೇವಾದಿಗಳೂ ವೇದಾಂತದ ದೃಷ್ಟಿಯಿಂದ ಅಸುರರೇ, ದೇವಾದಿಲೋಕಗಳೂ ಅಸುರಲೋಕಗಳೇ.

**ಅಸುರ್ಯಾ ನಾಮ ತೇ ಲೋಕಾಃ ಅಂಧೇನ ತಮಸಾಽಽವೃತಾಃ।**
**ತಾಗ್ಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ॥**

ಈಶಾವಾಸ್ಯೋಪನಿಷತ್ ೩

*ದೇವತೆಗಳ ಆ ಲೋಕಗಳು* ***ಅಸುರ್ಯ****ಲೋಕಗಳೆನಿಸುತ್ತವೆ. ಅವುಗಳು ಕುರುಡಾದ ಕತ್ತಲೆಯಿಂದ ಆವೃತವಾಗಿರುತ್ತದೆ. ಆತ್ಮಹನರಾದ ಜನಗಳು ಮರಣಾನಂತರ ಆ ಅಸುರ್ಯಲೋಕಗಳನ್ನು ಹೊಂದುತ್ತಾರೆ.*

ಎಂಥ ಭಯಂಕರವಾದ ಸಂದೇಶವನ್ನು ಈ ಮಂತ್ರವು ನೀಡುತ್ತಿದೆ!

**ಅಸುರಾಣಾಮಯಂ ಲೋಕಃ ಆಸುರೋ ಲೋಕಃ, ಅಸುರ್ಯೋ ಲೋಕಃ। ಪರಮಾತ್ಮಭಾವಮದ್ವಯಮ್ ಅಪೇಕ್ಷ್ಯ ದೇವಾದಯೋಽಪ್ಯ-ಸುರಾಃ।** ಶ್ರೀಶಂಕರರ ಭಾಷ್ಯ. ಕರ್ಮೋಪಾಸನೆಗಳನ್ನು ಮಾಡಿದ್ದರಿಂದ ಈಗ ಅಂಥವರು ಸ್ವರ್ಗಲೋಕದಲ್ಲಿ ದೇವತೆಗಳೇ ಆಗಿರಬಹುದು, ಆದರೆ ಇವರಿಗೆ ಅದ್ವೈತಬ್ರಹ್ಮದ ಜ್ಞಾನವಿಲ್ಲದ್ದರಿಂದ, **ಅಹಂ ಬ್ರಹ್ಮೇತಿ** ಎಂಬ ಬ್ರಹ್ಮಾತ್ಮಾನುಭವವಿಲ್ಲದ್ದರಿಂದ ದೇವತೆಗಳೇ ಆಗಿದ್ದರೂ ಇವರು ಅಸುರರೇ.

ಈ ದೇವಲೋಕಗಳು **ಅಂಧೇನ ತಮಸಾಽಽವೃತಾಃ. ಅದರ್ಶಾತ್ಮಕೇನ ಅಜ್ಞಾನೇನ ತಮಸಾ ಆವೃತಾಃ ಅಸುರ್ಯಾ ಲೋಕಾಃ।** ಕತ್ತಲೆಯ ರೂಪವಾದ ಅದರ್ಶಾತ್ಮಕವಾದ ಅಜ್ಞಾನದಿಂದ ಅಸುರ್ಯಲೋಕಗಳು ತುಂಬಿರುತ್ತವೆ ಎಂದು ಶ್ರೀಶಂಕರರ ಭಾಷ್ಯ. ಈ ಅಸುರ್ಯಲೋಕಗಳನ್ನು ಹೊಂದುವವರು ಆತ್ಮಹನರಾದ ಅಜ್ಞಾನಿಗಳು. **ವಿದ್ಯಮಾನಸ್ಯ ಆತ್ಮನಃ ಯತ್ ಕಾರ್ಯಂ ಫಲಮ್ ಅಜರಾಮರತ್ವಾದಿಲಕ್ಷಣಮ್, ತದ್ಧತಸ್ಯೇವ ತಿರೋಭೂತಂ ಭವತಿ ಇತಿ ಪ್ರಾಕೃತಾಃ ಅವಿದ್ವಾಂಸೋ ಜನಾಃ ಆತ್ಮಹನಃ ಉಚ್ಯಂತೇ।** ಎಂದು ಭಾಷ್ಯ. ಅಜ್ಞಾನಿಗಳೆಲ್ಲರೂ ಆತ್ಮಹನರೇ ಎಂದು ವೇದಾಂತಗಳು ಹೇಳುತ್ತಿವೆ.

**ಬ್ರಹ್ಮಾತ್ಮಜ್ಞಾನರಹಿತರೆಲ್ಲರೂ ಅಸುರರೇ ಎಂದು ತಿಳಿಯಬೇಕು**

# 11. ಕೃಪಣನೂ–ಬ್ರಾಹ್ಮಣನೂ

ಶುಕ್ಲಯಜುರ್ವೇದಕ್ಕೆ ಸೇರಿರುವ **ಬೃಹದಾರಣ್ಯಕೋಪನಿಷತ್ತಿನಲ್ಲಿ** ಭಗವಾನ್ ಯಾಜ್ಞವಲ್ಕ್ಯಮಹರ್ಷಿಗಳು ಗಾರ್ಗಿಗೆ ಅನೇಕ ವೇದಾಂತವಿಚಾರಗಳನ್ನು ತಿಳಿಸಿರುತ್ತಾರೆ. ಆತ್ಮಜ್ಞಾನದ ಮಹಿಮೆಯನ್ನೂ ಅಮೃತತ್ವಫಲದ ಸ್ವರೂಪವನ್ನೂ ಈ ಪ್ರಸಂಗದಲ್ಲಿ ಯಾಜ್ಞವಲ್ಕ್ಯರು ಅತ್ಯಂತ ಸುಂದರವಾಗಿ ತಿಳಿಸಿರುತ್ತಾರೆ. ಪವಿತ್ರವೂ ದುರ್ಲಭವೂ ಆದ ಮಾನವಜನ್ಮವು ಬಂದಿರುವಾಗ ಪ್ರತಿಯೊಬ್ಬನೂ ಪರಬ್ರಹ್ಮವೆಂಬ ಅಕ್ಷರವನ್ನು ತಿಳಿದರೆ ಮಾತ್ರವೇ ಜನ್ಮಸಾರ್ಥಕ್ಯವೆಂದೂ, ತಿಳಿಯದೇ ಹೋದರೆ ಅಂಥವನು **ಕೃಪಣನೆಂದೂ** ತಿಳಿಸಿರುತ್ತಾರೆ.

ಈಗ ಆ ಮೂಲಮಂತ್ರವನ್ನು ನೋಡೋಣ:

**ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾ ಅಸ್ಮಾತ್ ಲೋಕಾತ್ ಪ್ರೈತಿ ಸ ಕೃಪಣಃ। ಯೋ ವಾ ಏತದಕ್ಷರಂ ಗಾರ್ಗಿ ವಿದಿತ್ವಾ ಅಸ್ಮಾತ್ ಲೋಕಾತ್ ಪ್ರೈತಿ ಸ ಬ್ರಾಹ್ಮಣಃ॥**

*ಯಾವನು ಅಕ್ಷರಸ್ವರೂಪವನ್ನು ತಿಳಿಯದೇ ಮರಣವನ್ನು ಹೊಂದುತ್ತಾನೆಯೋ ಅವನು* ***ಕೃಪಣನು.*** *ಯಾವ ಮನುಷ್ಯನು, ನಾಶವಾಗದ ಈ ಆತ್ಮನನ್ನು ತಿಳಿದುಕೊಂಡೇ ಈ ಲೋಕದಿಂದ ತೆರಳುತ್ತಾನೆಯೋ ಅವನೇ ನಿಜವಾದ* ***ಬ್ರಾಹ್ಮಣನು****.*

ಬ್ರಹ್ಮವಿದನಾದ ಅಂಥವನನ್ನು **ಬ್ರಾಹ್ಮಣ**ನೆಂದೂ, ಬ್ರಹ್ಮವನ್ನು ತಿಳಿಯದೇ ಮೃತನಾದರೆ ಅಂಥವನನ್ನು **ಕೃಪಣ**ನೆಂದೂ ಭಗವಾನ್ ಯಾಜ್ಞವಲ್ಕ್ಯರು ಹೇಳಿದ್ದಾರೆ. **ಬ್ರಾಹ್ಮಣ** ಎಂದರೆ ಜನ್ಮದಿಂದ ಬ್ರಾಹ್ಮಣನು ಎಂದರ್ಥವಲ್ಲ; ಮತ್ತೇನೆಂದರೆ **ಬ್ರಹ್ಮ ಜಾನಾತಿ ಇತಿ ಬ್ರಾಹ್ಮಣಃ**; ಬ್ರಹ್ಮವನ್ನು ತಿಳಿದವನೇ ಬ್ರಾಹ್ಮಣನು ಎಂದು ತಿಳಿಯಬೇಕು. ಮನುಷ್ಯನಾಗಿ ಹುಟ್ಟಿದ ಮೇಲೆ ಹೇಗಾದರೂ ಮಾಡಿ ಸದ್ಗುರುಗಳಿಂದ ಪರಬ್ರಹ್ಮವನ್ನು ತಿಳಿದವನೇ **ಧೀರ**ನೆಂದೂ, **ವಿವೇಕಿ**ಯೆಂದೂ, **ಬ್ರಾಹ್ಮಣ**ನೆಂದೂ ವೇದಾಂತಗಳು ಹೇಳುತ್ತಿವೆ.

ಇನ್ನು, ಮನುಷ್ಯನಾಗಿ ಹುಟ್ಟಿಯೂ ಯಾವ ಮನುಷ್ಯನು ಬಾಹ್ಯವಿಷಯಗಳಲ್ಲಿಯೇ ಮಗ್ನನಾಗಿಬಿಟ್ಟು, ಅಕ್ಷರವನ್ನು ಎಂದರೆ ಪರಬ್ರಹ್ಮತತ್ತ್ವವನ್ನು ತಿಳಿಯುವುದಿಲ್ಲವೋ ಅವನನ್ನು **ಕೃಪಣ, ಮೂರ್ಖ, ಮೂಢ, ಅಲ್ಪ, ಮಂದ** ಎನ್ನುತ್ತಾರೆ. ಏಕೆಂದರೆ ಬ್ರಹ್ಮವನ್ನು ತಿಳಿದುಕೊಂಡು ಮುಕ್ತನಾಗುವುದಕ್ಕೆ ಸುವರ್ಣಾವಕಾಶವಿದ್ದರೂ ಅದನ್ನು ಪ್ರಮಾದದಿಂದ ಉಪಯೋಗಿಸಿಕೊಳ್ಳದವನು ಕೃಪಣನಲ್ಲವೇ? ಆದ್ದರಿಂದ ವಿವೇಕಿಯಾದ ಮಾನವನು ಸದ್ಗುರುಗಳಿಂದ ವೇದಾಂತಾರ್ಥ ತಿಳಿದು ಬ್ರಹ್ಮಜ್ಞಾನ ಪಡೆದು ಧೀರನಾದ ಬ್ರಾಹ್ಮಣನಾಗಬೇಕು.

**ಪ್ರತಿಯೊಬ್ಬನೂ ಬ್ರಹ್ಮವನ್ನು ತಿಳಿದು ಬ್ರಾಹ್ಮಣನಾಗಬೇಕು**

# 12. 'ಮತ್ವಾ ಧೀರೋ' ನ ಶೋಚತಿ

ಕಾಠಕೋಪನಿಷತ್ತಿನಲ್ಲಿ ಯಮಧರ್ಮರಾಯನು ನಚಿಕೇತನಿಗೆ ಆತ್ಮನನ್ನು ಕುರಿತು ವಿಸ್ತಾರವಾಗಿ ಉಪದೇಶಿಸಿರುತ್ತಾನೆ. ಅಲ್ಲಲ್ಲಿ ಮೃತ್ಯುದೇವತೆಯು **ಮತ್ವಾ ಧೀರೋ ನ ಶೋಚತಿ,** ಆತ್ಮನನ್ನು ತಿಳಿದ ಧೀರನು ಶೋಕಿಸುವುದಿಲ್ಲ ಎಂದು ಹೇಳಿರುತ್ತಾನೆ. ಉದಾಹರಣೆಗೆ: ಕಾಠಕೋಪನಿಷತ್ ೨-೨೨

**ಅಶರೀರಂ ಶರೀರೇಷು ಅನವಸ್ಥೇಷ್ವವಸ್ಥಿತಮ್।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ॥**

*ದೇಹಗಳೊಳಗೇ ಇದ್ದರೂ ದೇಹದ ಸಂಬಂಧವಿಲ್ಲದಿರುವಂಥ, ಬದಲಾವಣೆ ಹೊಂದುತ್ತಿರುವ ಪ್ರಪಂಚದೊಳಗೇ ಇದ್ದರೂ ವಿಕಾರಿಯಾಗದಿರುವಂಥ, ಮಹಾಂತನೂ ವಿಭುವೂ ಆದ ಆತ್ಮನನ್ನು ತಿಳಿದ ಧೀರನು ಶೋಕಿಸುವುದಿಲ್ಲ.*

ಆತ್ಮನು ನಮ್ಮೊಳಗೇ ಇದ್ದರೂ ಆತ್ಮನಿಗೆ ದೇಹದ ಅಂಟುಗಳಿಲ್ಲ. ದೇಹವೆಂದರೆ ರೋಗರುಜಿನಾದಿಗಳಿಗೆ ಆಶ್ರಯವಾದ ಪಾಂಚಭೌತಿಕವಸ್ತು. ರಕ್ತ, ಮಾಂಸ, ಮೂಳೆ, ಕೀವು, ಮಲ, ಮೂತ್ರಾದಿಗಳಿಂದ ಕೂಡಿದ್ದು ಶರೀರ. ಆದರೆ ಈ ದೋಷಗಳಾವುವೂ ಆತ್ಮನಿಗೆ ಅಂಟುಕೊಂಡಿಲ್ಲ. ಈ ದೇಹವು ನಿತ್ಯವಿಕಾರಿ, ನಿತ್ಯ ಅಶುದ್ಧ, ನಿತ್ಯ ಜಡವಾಗಿದ್ದರೂ; ಆತ್ಮನು ಮಾತ್ರ ನಿತ್ಯ ಅವಿಕಾರಿಯಾಗಿರುತ್ತಾನೆ. ಹೀಗೆ ನಿತ್ಯಶುದ್ಧ ನಿತ್ಯಬುದ್ಧ ನಿತ್ಯಮುಕ್ತ ಆತ್ಮನನ್ನು ತಾನೆಂದು ತಿಳಿದವನಿಗೆ ಯಾವ ದುಃಖದ ಅಂಟೂ ಇರುವುದಿಲ್ಲ. **ಹೀಗೆ ತಿಳಿದವನೇ ಧೀರನು.**

**ಅಧ್ಯಾತ್ಮಯೋಗಾಧಿಗಮೇನ ದೇವಂ**
**ಮತ್ವಾ ಧೀರೋ ಹರ್ಷಶೋಕೌ ಜಹಾತಿ॥** ಕಾಠಕೋಪನಿಷತ್ ೨-೧೨

*ಅಧ್ಯಾತ್ಮಯೋಗದಿಂದ ಆತ್ಮನನ್ನು ತಿಳಿದವನಿಗೆ ಹರ್ಷಶೋಕಗಳಿರುವುದಿಲ್ಲ.*

ಇಲ್ಲಿ ನಾವು ಗಮನಿಸಬೇಕಾದ ಅಂಶವೇನೆಂದರೆ: **ಮತ್ವಾ ಧೀರಃ** ಎಂಬುದನ್ನು ಗಮನಿಸಬೇಕು. ತಿಳಿದವನೇ ಧೀರನು. ಧೀರನು ಯಾಕೆಂದರೆ, ಆತ್ಮನ ನಿಜಸ್ವರೂಪವನ್ನು ಅನುಭವದಿಂದ ನಿಶ್ಚಿತವಾಗಿ ತಿಳಿದವನು. ಹೀಗಾಗಿ ವಸ್ತುತಂತ್ರಜ್ಞಾನವನ್ನು ಬಲ್ಲವನೇ **ವೇದಾಂತದಲ್ಲಿ ಧೀರನು** ಎನಿಸುತ್ತಾನೆ.

**ಮತ್ವಾ ಧೀರೋ ನ ಶೋಚತಿ, ಕೃತ್ವಾ ದೀನೋ ವಿಶೋಚತಿ.** ಆತ್ಮನನ್ನು ತಿಳಿದವನು ದುಃಖಿಸುವುದಿಲ್ಲ ; ಕರ್ಮಗಳಷ್ಟನ್ನೇ ಮಾಡುತ್ತಿರುವವನು ದೀನನಾಗಿ ನಾನಾ ರೀತಿಯಲ್ಲಿ ಶೋಕಿಸುತ್ತಿರುತ್ತಾನೆ. ತಿಳಿದವನೇ ಧೀರನು, ತಿಳಿಯದೇ ಕೇವಲ ಕರ್ಮಿಯಾದವನು ದೀನನು ಎಂದು ತಿಳಿಯಬೇಕು.

**ತಾನೇ ಬ್ರಹ್ಮವೆಂದು ತಿಳಿದವನೇ ಧೀರನೆನಿಸುತ್ತಾನೆ**

# 13. ಎಷ್ಟು ಅಧಿಕ? ಎಷ್ಟು ಕಡಿಮೆ?

**"ವೇದಾಂತದಲ್ಲಿ ಧೀರರು"** ನಿಜಕ್ಕೂ ಭಾಗ್ಯವಂತರು, ನಿಜವಾಗಿಯೂ ಅದೃಷ್ಟಶಾಲಿಗಳು. ಏಕೆಂದರೆ ಇವರೇ ನಿಜವಾಗಿಯೂ ವಿವೇಕಿಗಳು. ಆದರೆ ಇಂಥ ಧೀರರು ಲೋಕದಲ್ಲಿ ಕೇವಲ ಬೆರಳೆಣಿಕೆಯಷ್ಟೇ ಸಿಕ್ಕುತ್ತಾರೆ; ಏಕೆಂದರೆ ಇವರು ವೇದಾಂತದಲ್ಲಿ ಮುಳುಗಿರುವ ಧೀರರು; ಲೌಕಿಕಭಾಗ್ಯಗಳನ್ನು ತಿರಸ್ಕರಿಸಿ, ಆತ್ಮಜ್ಞಾನಪ್ರಾಪ್ತಿಗಾಗಿ ಧೈರ್ಯವಾಗಿ ವೇದಾಂತಮಾರ್ಗದಲ್ಲಿ ಮುನ್ನುಗ್ಗುತ್ತಿರುವ ಧೀರರಿವರು. ಲೋಕದಲ್ಲಿ ಲೌಕಿಕಭೋಗಗಳನ್ನು ಬಯಸುವ ಜನಗಳು **ಅಧಿಕ**ವಾಗಿರುತ್ತಾರೆ. ಆದರೆ ನಿವೃತ್ತಿಧರ್ಮದಲ್ಲಿ ಆಸಕ್ತರಾದವರು ತುಂಬಾ **ಕಡಿಮೆ** ಸಂಖ್ಯೆಯಲ್ಲಿದ್ದಾರೆ.

ಇದಕ್ಕೊಂದು ಸಣ್ಣ ಉದಾಹರಣೆಯನ್ನು ನೋಡೋಣ: ಕರ್ನಾಟಕ ರಾಜ್ಯ ದಲ್ಲಿ ಒಟ್ಟು ಎಂಟು ಕೋಟಿ ಜನಗಳಿದ್ದಾರೆ. ಇವರಲ್ಲಿ ವಿವಾಹಕ್ಕೆ ಯೋಗ್ಯರಾದ, ೨೬ ರಿಂದ ೩೫ ರ ವಯಸ್ಸಿನ **ವರಗಳು ಸುಮಾರು ಐದು ಲಕ್ಷ** ಇರಬಹುದು. ಸುಮಾರು **ಎರಡು ಲಕ್ಷ ವಧುಗಳೂ** ಇರಬಹುದು. ಇಡೀ ಕರ್ನಾಟಕರಾಜ್ಯ ದಲ್ಲಿ ಒಟ್ಟು ಮದುವೆ ಛತ್ರಗಳು **ಐದು ಸಾವಿರ** ಇರಬಹುದು. ಇಡೀ ಕರ್ನಾಟಕ ದಲ್ಲಿ ಒಂದು ವರ್ಷಕ್ಕೆ ಸುಮಾರು **ಒಂದು ಲಕ್ಷ ಮದುವೆ**ಗಳಾಗಬಹುದು. ಹೀಗಾಗಿ ಎಲ್ಲಾ ಛತ್ರಗಳೂ ಭರ್ತಿಯಾಗಿರುತ್ತವೆ. ಇದೆಲ್ಲವೂ ಸುಮ್ಮನೇ ಕಾಲ್ಪನಿಕ ವಾದ ಸಂಖ್ಯೆಗಳು, ಇರಲಿ. ಎಂಟು ಕೋಟಿ ಜನರಲ್ಲಿ ಒಂದು ವರ್ಷಕ್ಕೆ **ಒಂದು ಲಕ್ಷ ಜನಗಳು** ಗೃಹಸ್ಥಾಶ್ರಮಕ್ಕೆ ಪದಾರ್ಪಣೆ ಮಾಡುತ್ತಾರೆ. ಸರಿ, ಅನಂತರ ಮಕ್ಕಳು, ಮನೆ, ಕಾರ್, ವಿದೇಶಪ್ರವಾಸ, ಬಂಗಾರದ ಬೆಳ್ಳಿಯ ಆಭರಣ— ಇತ್ಯಾದಿಗಳಿಂದ ಅವರು ಸಂತೋಷಪಡುತ್ತಾರೆ, ಆಗಲಿ.

ಇದಿಷ್ಟೂ ಸಂತೋಷ; ಆದರೆ, ಆದರೆ, ಆದರೆ, ಆದರೆ! ಆ ಎಂಟು ಕೋಟಿ ಜನಗಳ ಪೈಕಿ ಎಷ್ಟು ಜನಗಳು ಈ ಸಾಂಸಾರಿಕ ವಿಷಯಭೋಗಗಳಿಂದ ವಿರಕ್ತರಾಗಿ **ವೇದಾಂತದಲ್ಲಿ ಧೀರರಾಗಿ, ಸಂನ್ಯಾಸದೀಕ್ಷೆಯನ್ನು ಸ್ವೀಕರಿಸುತ್ತಾರೆ**? ನೂರಕ್ಕೆ ಒಬ್ಬರಂತೆ, ಸಾವಿರಕ್ಕೆ ಒಬ್ಬರಂತೆ, ಹತ್ತು ಸಾವಿರಕ್ಕೆ ಒಬ್ಬರಂತೆ **ಯತ್ಯಾಶ್ರಮಿ**ಗಳಾಗಬಹುದಲ್ಲವೇ? ಮದುವೆ ಸಂಭ್ರಮಗಳನ್ನು ನಾವು ಪ್ರತಿದಿನವೂ ಕಾಣುತ್ತೇವೆ. ಒಂದು ವರ್ಷದಲ್ಲಿ ಲಕ್ಷಾಂತರ ಮದುವೆಗಳಾಗುತ್ತಿವೆ; ಇದನ್ನು ಸಹಸ್ರಾರು ಜನಗಳು ಕಾಣುತ್ತಾರೆ. ಆದರೆ ಸಂನ್ಯಾಸಿಗಳಾಗಿ, ನಿವೃತ್ತಿ ಧರ್ಮಪರಾಯಣರಾಗಿ ಮುಮುಕ್ಷುಗಳಾಗಿ ವೇದಾಂತಚಿಂತನತತ್ಪರರಾದವರನ್ನು ನಾವು ಲಕ್ಷಗಟ್ಟಲೇ ಕಾಣಲಾರೆವು. ಗೃಹಸ್ಥರಾಗುವಂಥ ಜನಗಳು ಲಕ್ಷಗಟ್ಟಲೇ! ಸಂನ್ಯಾಸಿಗಳಾಗುವಂಥ ಜನಗಳು ನೂರುಗಟ್ಟಲೇ! ಇದು ನಮ್ಮೆಲ್ಲರ ಅನುಭವ.

**ನಿವೃತ್ತಿಧರ್ಮನಿರತರಾದ ಧೀರರು ಅತ್ಯಂತ ದುರ್ಲಭರೇ**

# 14. ಸಹಸ್ರೇಷು ಕಶ್ಚಿತ್

ಈ ವಿಶಾಲಪ್ರಪಂಚದಲ್ಲಿ ಪ್ರತಿಯೊಬ್ಬರೂ ಧೀರರೇ ಆಗಿರುತ್ತಾರೆ. ಏಕೆಂದರೆ ಆಯಾ ವಿಷಯಗಳಲ್ಲಿ ಅವರು ಧೀರರೇ ಹೌದು. ಈ ಜಗತ್ತಿನಲ್ಲಿ ನೂರಾರು ಸಹಸ್ರಾರು ಭಿನ್ನ ಭಿನ್ನ ಕ್ಷೇತ್ರಗಳಿರುತ್ತವೆ. ಆ ಕ್ಷೇತ್ರಗಳಲ್ಲಿ ಅದ್ಭುತ ಕೆಲಸಗಳನ್ನು ಮಾಡಿದವರೆಲ್ಲರೂ ಧೀರರೇ ಆಗಿರುತ್ತಾರೆ. ಆದರೆ ಇಂಥವರನ್ನು ನಾವಿಲ್ಲಿ ಧೀರರು ಎಂದು ಪರಿಗಣಿಸುತ್ತಿಲ್ಲ. ಏಕೆಂದರೆ ನಾವಿಲ್ಲಿ ವಿಚಾರ ಮಾಡುತ್ತಿರುವುದು **ವೇದಾಂತದಲ್ಲಿ ಧೀರರು** ಯಾರು? ಎಂಬುದನ್ನು.

ಸರಿ, ಹಾಗಾದರೆ **ವೇದಾಂತ ಧೀರರು** ಸಾಕಷ್ಟು ಇದ್ದಾರೆಯೇ? ಎಂದರೆ ಇಲ್ಲ; **ವೇದಾಂತದಲ್ಲಿ ಧೀರರು**, ಈ ಜಗತ್ತಿನಲ್ಲಿ ಕೆಲವರು ಮಾತ್ರವೇ ಇದ್ದಾರೆ. ಇದನ್ನೇ ಗೀತಾಚಾರ್ಯನಾದ ಶ್ರೀಕೃಷ್ಣಭಗವಂತನು ಹೀಗೆ ಹೇಳಿದ್ದಾನೆ:

**ಮನುಷ್ಯಾಣಾಂ ಸಹಸ್ರೇಷು ಕಶ್ಚಿತ್ ಯತತಿ ಸಿದ್ಧಯೇ।**
**ಯತತಾಮಪಿ ಸಿದ್ಧಾನಾಂ ಕಶ್ಚಿತ್ ಮಾಂ ವೇತ್ತಿ ತತ್ತ್ವತಃ॥**

ಭಗವದ್ಗೀತಾ ೭-೩

*ಅರ್ಜುನನೇ, ಅನೇಕ ಸಹಸ್ರ ಮನುಷ್ಯರಲ್ಲಿ ಯಾವನೋ ಒಬ್ಬನು ಆತ್ಮಜ್ಞಾನಸಿದ್ಧಿಗಾಗಿ ಪ್ರಯತ್ನಿಸುತ್ತಾನೆ. ಇಂಥ ಅನೇಕರಲ್ಲಿ ಎಲ್ಲೋ ಒಬ್ಬನು ಮಾತ್ರ ನನ್ನನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಾನೆ.*

ಎಷ್ಟು ಸಹಜವಾದ ಮಾತಿದು! ಈ ಪ್ರಪಂಚದಲ್ಲಿ ಕೋಟಿ ಕೋಟಿ ಜನಗಳಿದ್ದಾರೆ, ದಿಟ. ಆದರೆ ಅವರಲ್ಲಿ ಎಷ್ಟು ಜನಗಳಿಗೆ ವೇದಾಂತದಲ್ಲಿ ಆಸಕ್ತಿಯಿದೆ? ಎಷ್ಟು ಜನಗಳು ವೇದಾಂತಗಳನ್ನು ಶ್ರದ್ಧೆಯಿಂದ ಓದುತ್ತಿದ್ದಾರೆ? ಎಷ್ಟು ಜನಗಳಿಗೆ ನಿಜವಾಗಿಯೂ ಆತ್ಮಜ್ಞಾನವು ಬೇಕಾಗಿದೆ? ಎಷ್ಟು ಜನಗಳು ಸಾಧನಚತುಷ್ಟಯಸಂಪನ್ನರಾಗಿದ್ದಾರೆ? ಎಷ್ಟು ಜನಗಳಿಗೆ ಆತ್ಮಾನಾತ್ಮ ವಿವೇಕವಿದೆ? ಎಷ್ಟು ಜನಗಳು ನಿಜವಾಗಿಯೂ ಮುಮುಕ್ಷುಗಳಾಗಿದ್ದಾರೆ? ಎಂಬ ಪ್ರಶ್ನೆಗಳಿಗೆ ಉತ್ತರ, **ಮನುಷ್ಯಾಣಾಂ ಸಹಸ್ರೇಷು ಏಕಃ** ಎಂಬುದೇ ಆಗಿದೆ.

ಹೀಗಾಗಿ **ವೇದಾಂತದಲ್ಲಿ ಧೀರನು** ಸಹಸ್ರಕ್ಕೆ ಅಥವಾ ಲಕ್ಷಕ್ಕೆ ಒಬ್ಬನೇ ಎಂದು ತಿಳಿಯಬೇಕು. ಈ ಮಾನವಜನ್ಮದ ಮಹತ್ತ್ವವನ್ನೂ, ಹೆಗ್ಗುರಿಯನ್ನೂ, ಸಾಧನಗಳನ್ನೂ ಸರಿಯಾಗಿ ಸದ್ಗುರುಗಳಿಂದ ಅರ್ಥಮಾಡಿಕೊಂಡವನೇ ಧೀರನು. ಇವನು ವೇದಾಂತ ಸಂದೇಶಗಳನ್ನು ಅರ್ಥಮಾಡಿಕೊಂಡು, ಆತ್ಮಜ್ಞಾನವನ್ನೇ ಹೊಂದಿ ಕೃತಾರ್ಥನೇ ಆಗಿಬಿಡುತ್ತಾನೆ. ಇಂಥ ವಿವೇಕಿಯಾದ, ವಿರಕ್ತನಾದ ಧೀರನು ಲಕ್ಷಕ್ಕೊಬ್ಬನಂತೆ ಇದ್ದರೂ ಅದೇ ಹೆಚ್ಚಿನದಲ್ಲವೇ?

**'ವೇದಾಂತದಲ್ಲಿ ಧೀರನು' ಲಕ್ಷಕ್ಕೊಬ್ಬನು ಇರಬಹುದು**

## 15. ಗುರುವಿನಿಂದ ಶಿಷ್ಯನ ಸ್ತುತಿ

ಸಾಮಾನ್ಯವಾಗಿ ಶಿಷ್ಯರು ತಮ್ಮ ಗುರುಗಳನ್ನು ಸ್ತುತಿಸಿ, ಅವರನ್ನು ಪೂಜಿಸುವುದನ್ನು ನಾವು ವೇದಶಾಸ್ತ್ರಪುರಾಣಗಳಲ್ಲಿ ಕಾಣುತ್ತೇವೆ, ಮತ್ತು ಲೋಕದಲ್ಲಿಯೂ ಇದೇ ವಾಡಿಕೆಯಿದೆ. ಆದರೆ ವೇದಾಂತಕ್ಷೇತ್ರದಲ್ಲಿ ಮಾತ್ರ ಸದ್ಗುರುವೇ ತನ್ನ ಯೋಗ್ಯನಾದ ಸಚ್ಛಿಷ್ಯನನ್ನು ಬಾಯಿತುಂಬಾ ಹೊಗಳುವ ಪದ್ಧತಿಯಿದೆ. ಏಕೆಂದರೆ ತನ್ನ ಹತ್ತಿರಕ್ಕೆ ಬಂದಿರುವವನು ಕೇವಲ ಒಬ್ಬ ಶಿಷ್ಯನಲ್ಲ, ಮತ್ತೇನೆಂದರೆ **ವೇದಾಂತದಲ್ಲಿ ಧೀರನಾದ**, ಮೋಕ್ಷಾಪೇಕ್ಷಿಯಾದ, ಕೋಟಿಗೊಬ್ಬನಾದ ಶಿಷ್ಯ. ಇವನನ್ನು ಕಂಡು ಸದ್ಗುರುವಿಗೆ ಪರಮಾನಂದವಾಗುತ್ತದೆಯಲ್ಲವೇ?

ಇದಕ್ಕೆ ನಚಿಕೇತನ ಉದಾಹರಣೆಯನ್ನು ನೋಡೋಣ: ನಚಿಕೇತನು ಯಮನ ಹತ್ತಿರಕ್ಕೆ ಬಂದು, ನಮಸ್ಕರಿಸಿ, ಆತ್ಮನ ಜ್ಞಾನವನ್ನು ಉಪದೇಶಿಸುವಂತೆ ಕೇಳಿಕೊಳ್ಳುತ್ತಾನೆ. ಅವನನ್ನು ಪರೀಕ್ಷಿಸಲು ಯಮನು ಅನೇಕ ಪ್ರಲೋಭನೆಗಳನ್ನು ತೋರಿಸುತ್ತಾನೆ. ಅದಾವುದನ್ನೂ ಸ್ವೀಕರಿಸದೆ, ಅದೆಲ್ಲವನ್ನೂ ಬಿಟ್ಟು ನಚಿಕೇತನು "ನನಗೆ ಆತ್ಮಜ್ಞಾನವನ್ನೇ ಉಪದೇಶಿಸು, ನನಗೆ ಈ ಭೋಗಗಳಾವುವೂ ಬೇಕಾಗಿಲ್ಲ" ಎಂದು ಧೈರ್ಯವಾಗಿ ಹೇಳುತ್ತಾನೆ. ಶಿಷ್ಯನ ಯೋಗ್ಯತೆಯನ್ನು ಕಂಡು ವೇದಾಂತಾಚಾರ್ಯನಾದ ಯಮದೇವನಿಗೆ ತುಂಬಾ ತುಂಬಾ ಸಂತೋಷವಾಗುತ್ತದೆ. ಮೃತ್ಯುದೇವತೆಯು ಸ್ವತಃ ಬ್ರಹ್ಮನಿಷ್ಠನಾದ ವೇದಾಂತ ಸದ್ಗುರುವೇ ಆಗಿದ್ದರೂ, ತನ್ನ ಸಚ್ಛಿಷ್ಯನಾದ ನಚಿಕೇತನನ್ನು ಹೀಗೆ ಸ್ತುತಿಸುತ್ತಾನೆ:

**ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ**
**ತ್ವಾದೃಙ್ ನೋ ಭೂಯಾನ್ನಚಿಕೇತಃ ಪ್ರಷ್ಟಾ।** ಕಾಠಕೋಪನಿಷತ್ ೨-೯

*ಎಲೈ ನಚಿಕೇತನೇ, ನೀನು ದೃಢನಿಶ್ಚಯವುಳ್ಳವನಾಗಿ ಆತ್ಮಜ್ಞಾನವನ್ನೇ ಬಯಸುತ್ತಿದ್ದೀಯೆ; ನಿನ್ನಂಥ ಶಿಷ್ಯನು ನನಗೆ ಬೇಕು, ನಿನ್ನಂಥ ಉತ್ತಮ ಮುಮುಕ್ಷು ಸಾಧಕರು ನನಗೆ ಶಿಷ್ಯರಾಗಿ ಇನ್ನೂ ಅನೇಕರು ಬರಲಿ.*

**ಸ್ತೋಮಂ ಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ**
**ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ॥** ಕಾಠಕೋಪನಿಷತ್ ೨-೧೧

*ಎಲೈ ನಚಿಕೇತನೇ, ನೀನು ಅತ್ಯಂತ ಸ್ತುತ್ಯವೂ ಶ್ರೇಷ್ಠವೂ, ದೊಡ್ಡದೂ ಆದ ಬ್ರಹ್ಮಲೋಕದ ವರೆಗಿನ ಎಲ್ಲಾ ಭೋಗಗಳನ್ನೂ ವಿವೇಕದ ಬಲದಿಂದ ವಿಚಾರಮಾಡಿ, ಧೈರ್ಯವಾಗಿ ತಿರಸ್ಕರಿಸಿದ್ದೀಯೆ; ನಿಜವಾಗಿಯೂ ನೀನು ಧೀರನಾಗಿದ್ದೀಯೆ; ನಿನಗೆ ಮಂಗಳವಾಗಲಿ. ನೀನು ಉತ್ತಮೋತ್ತಮನಾದ **ವೇದಾಂತಧೀರ**ನಾಗಿದ್ದೀಯೆ.*

**ಶಿಷ್ಯನು ಸದ್ಗುರುವಿನ ಸ್ತುತಿಗೆ ಪಾತ್ರನಾಗುವಂತಾಗಬೇಕು**

# 16. ವೇದಾಂತೇ ಧೀರಮಷ್ಟಕಮ್

ಪ್ರಣಮ್ಯ ಶಂಕರಾಚಾರ್ಯಂ **ವೇದಾಂತೇ ಧೀರಮ**ದ್ವಯಮ್ ।
ನತ್ವಾ ಶ್ರೀರಮಣಂ ಪೂಜ್ಯಂ **ವೇದಾಂತೇ ಧೀರಮ**ಚ್ಯುತಮ್ ॥

ಪಠೇತ್ ಪ್ರತಿದಿನಂ ಸ್ತೋತ್ರಂ **ವೇದಾಂತೇ ಧೀರಮ**ಷ್ಟಕಮ್ ।
ಜ್ಞಾನವೈರಾಗ್ಯಸಿದ್ಧ್ಯರ್ಥಂ ಧೈರ್ಯಮೋಕ್ಷಪ್ರಸಿದ್ಧಯೇ ॥

ವಿಷಯೇಭ್ಯೋ ವಿನಿರ್ಮುಕ್ತಂ ವೇದಾಂತಾಸಕ್ತಮಾನಸಮ್ ।
ವಿವೇಕಿನಂ ಮಹಾಪ್ರಾಜ್ಞಂ **ವೇದಾಂತೇ ಧೀರಮಾಶ್ರಯೇ** ॥ ೧ ॥

ಸುಪ್ರಸನ್ನಂ ಸದಾ ಶಾಂತಂ ನೈಷ್ಠಿಕಂ ಬ್ರಹ್ಮಚಾರಿಣಮ್ ।
ವೀರಂ ಶೂರಂ ಮಹಾತ್ಮಾನಂ **ವೇದಾಂತೇ ಧೀರಮಾಶ್ರಯೇ** ॥ ೨ ॥

ಸ್ವಾತ್ಮನಿಷ್ಠಂ ಬ್ರಹ್ಮನಿಷ್ಠಂ ತತ್ತ್ವನಿಷ್ಠಂ ನಿರಂಜನಮ್ ।
ಸರ್ವಾತ್ಮಭಾವಸಂಪನ್ನಂ **ವೇದಾಂತೇ ಧೀರಮಾಶ್ರಯೇ** ॥ ೩ ॥

ಮುಮುಕ್ಷುಂ ಬ್ರಹ್ಮಜಿಜ್ಞಾಸುಂ ಗುರುಭಕ್ತಂ ತಪೋನಿಧಿಮ್ ।
ಬ್ರಹ್ಮವಿದ್ಯಾರ್ಥಿನಂ ಶ್ರೇಷ್ಠಂ **ವೇದಾಂತೇ ಧೀರಮಾಶ್ರಯೇ** ॥ ೪ ॥

ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋ ಹಿ ತೇ ।
ಬ್ರಹ್ಮಲೋಕಾದ್ ವಿರಕ್ತಂ ತಂ **ವೇದಾಂತೇ ಧೀರಮಾಶ್ರಯೇ** ॥ ೫ ॥

ವೇದಾಂತೇ ಪರಮಾನಂದಂ ವೇದಾಂತೇ ಪರಮಾಂ ರತಿಮ್ ।
ವೇದಾಂತಾನಂದಸಂತೃಪ್ತಂ **ವೇದಾಂತೇ ಧೀರಮಾಶ್ರಯೇ** ॥ ೬ ॥

ವೇದಾಂತಶಾಸ್ತ್ರಮರ್ಮಜ್ಞಂ ವೇದಾಂತಾರ್ಥಪ್ರಬೋಧಕಮ್ ।
ಸದಾ ವೇದಾಂತಸಂತುಷ್ಟಂ **ವೇದಾಂತೇ ಧೀರಮಾಶ್ರಯೇ** ॥ ೭ ॥

ವೇದಾಂತಾನ್ ಪ್ರವದನ್ ನಿತ್ಯಂ ವೇದಾಂತೇಷು ಪರಾಯಣಮ್ ।
ಸದಾವೇದಾಂತಸಂಮಗ್ನಂ **ವೇದಾಂತೇ ಧೀರಮಾಶ್ರಯೇ** ॥ ೮ ॥

ಯಃ ಪಠೇತ್ ಪ್ರತ್ಯಹಂ ಸ್ತೋತ್ರಂ **ವೇದಾಂತೇ ಧೀರಮ**ಷ್ಟಕಮ್ ।
ಧೈರ್ಯಸ್ಥೈರ್ಯಪ್ರದಂ ಧೀರಮ್ ಆತ್ಮಜ್ಞಾನಪ್ರದಾಯಕಮ್ ॥

ಮುಮುಕ್ಷೂಣಾಂ ಕಾಮಧೇನುಂ ವೇದಾಂತಾರ್ಥಪ್ರಕಾಶಕಮ್ ।
ಸದ್ಯೋಮುಕ್ತಿಂ ಸ ಲಭತೇ **ವೇದಾಂತಾನಾಂ** ಪ್ರಸಾದತಃ ॥

**॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

## 17. ಧೀರನಿಗೇ ಆತ್ಮಜ್ಞಾನ

ಮೃತ್ಯುದೇವತೆಯು ನಚಿಕೇತನನ್ನು ಬಾಯಿತುಂಬಾ ಹೊಗಳುತ್ತಾನೆ. ಏಕೆಂದರೆ ನಚಿಕೇತನು **ಧೀರನಾದ ಮುಮುಕ್ಷು ಸಾಧಕನಾಗಿರುತ್ತಾನೆ.** ಧೀರನಿಗೆ ಮಾತ್ರವೇ ಆತ್ಮಜ್ಞಾನವಾಗುತ್ತದೆಯೇ ಹೊರತು ಅಧೀರರಿಗೆ ಅಲ್ಲ ಎಂಬುದನ್ನು ಯಮದೇವನು ಈ ಕೆಳಗಿನ ಮಂತ್ರದಲ್ಲಿ ಹೀಗೆ ಹೇಳಿರುತ್ತಾನೆ:

**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ**
**ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ।**
**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ**
**ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ॥** ಕಠೋಪನಿಷತ್ ೨-೭

*ಈ ಆತ್ಮನನ್ನು ಏಕಾಗ್ರತೆಯಿಂದ ಶ್ರವಣಮಾಡುವಂಥ ಧೀರರೂ ಆಶ್ಚರ್ಯ, ಶ್ರವಣ ಮಾಡಿದರೂ ಸರಿಯಾಗಿ ಸ್ವಾನುಭವದಿಂದ ಆತ್ಮನನ್ನು ತಿಳಿಯುವಂಥ ಧೀರರೂ ಆಶ್ಚರ್ಯವೇ; ಆತ್ಮನನ್ನು ಶಿಷ್ಯನಿಗೆ ಸರಿಯಾಗಿ ತಿಳಿಸುವಂಥಾ ಧೀರರೂ ಆಶ್ಚರ್ಯ, ಈ ಆತ್ಮನನ್ನು ಹೊಂದುವಂಥಾ ಧೀರನೂ ಆಶ್ಚರ್ಯವೇ! ಬ್ರಹ್ಮನಿಷ್ಠನಾದ ಸದ್ಗುರುವಿನಿಂದ ಉಪದಿಷ್ಟನಾಗಿ ಆತ್ಮನನ್ನು ತಿಳಿಯುವ ಧೀರನೂ ಆಶ್ಚರ್ಯವೇ!*

ಇದು ಇಪ್ಪತ್ತೊಂದನೆಯ ಶತಮಾನದ ಮಾತಲ್ಲ ; ಮತ್ತೇನೆಂದರೆ ಇದು ವೇದಕಾಲದ ಮಾತು, ನೆನಪಿರಲಿ; ಆತ್ಮನ ವಿಷಯದಲ್ಲಿ ಎಲ್ಲವೂ ಆಶ್ಚರ್ಯವೇ! ಆತ್ಮೋಪದೇಶವನ್ನು ಕೇಳುವವರೂ ದುರ್ಲಭ, ಕೇಳಿದರೂ ಸ್ವಾನುಭವದಿಂದ ಅರ್ಥಮಾಡಿಕೊಳ್ಳುವವರೂ ದುರ್ಲಭ; ಸ್ವಾನುಭವದಿಂದ ಬ್ರಹ್ಮಾತ್ಮತತ್ತ್ವವನ್ನು ಅರ್ಥವಾಗುವಂತೆ ಉಪದೇಶಿಸುವ ಸದ್ಗುರುವೂ ದುರ್ಲಭ; ಇನ್ನು **'ಅಹಂ ಬ್ರಹ್ಮಾಸ್ಮಿ'** ಎಂದು ಬ್ರಹ್ಮಾತ್ಮತತ್ತ್ವವನ್ನು ಸ್ವಾನುಭವದಿಂದ ತಿಳಿಯುವಂಥ ಧೀರರಂತೂ ತುಂಬಾ ದುರ್ಲಭರೇ ಆಗಿರುತ್ತಾರೆ. ಕುಶಲನಾದ ಸದ್ಗುರುವು ಶಿಷ್ಯನಿಗೆ ಉಪದೇಶಮಾಡಿದಮೇಲೆ ಅದರಂತೆ ಆತ್ಮತತ್ತ್ವವನ್ನು ಸ್ವಾನುಭವ ದಿಂದ ತಿಳಿದುಕೊಳ್ಳುವಂಥ ಧೀರನಾದ ಶಿಷ್ಯನೂ ದುರ್ಲಭನೇ ಆಗಿರುತ್ತಾನೆ.

ಬ್ರಹ್ಮವಿದ್ಯೆಯನ್ನು ಶಿಷ್ಯರಿಗೆ ಉಪದೇಶಿಸುವ ಸದ್ಗುರುವೂ ಬ್ರಹ್ಮನಿಷ್ಠನಾಗಿರ ಬೇಕು. ಶಿಷ್ಯರಿಗೆ ಅರ್ಥವಾಗುವಂತೆ ಸರಳವಾಗಿ ಸುಲಭವಾಗಿ ತಿಳಿಸಬೇಕು. ಇನ್ನು ಆತ್ಮನನ್ನು ಅರಿತುಕೊಳ್ಳಬೇಕಾದರೆ ಅಂಥ ಶಿಷ್ಯನು ಚಿತ್ತಶುದ್ಧಿಯುಳ್ಳವನಾಗಿ ವಿವೇಕಿಯೂ ವಿರಕ್ತನೂ ನಿಜವಾದ ಮುಮುಕ್ಷುವೂ ಆಗಿರಬೇಕು. ಹೀಗಿದ್ದರೇ ಅಂಥವನಿಗೆ ಬ್ರಹ್ಮಾತ್ಮಜ್ಞಾನವು ಉಂಟಾಗುತ್ತದೆಯೇ ಹೊರತು ಧೀರನಲ್ಲದವನಿಗೆ ಆತ್ಮಜ್ಞಾನವು ಉಂಟಾಗದು.

**ವೇದಾಂತದಲ್ಲಿ ಗುರುಶಿಷ್ಯರಿಬ್ಬರೂ ಧೀರರಾಗಿರಬೇಕು**

# 18. ಇಲ್ಲಿಯೇ ಪ್ರಯತ್ನಿಸುವವನೇ ಧೀರ

ಮಾನವರಿಗೆ ಭಗವಂತನು ಸುವರ್ಣಾವಕಾಶವನ್ನು ಯಾವಾಗಲೂ ಕೊಡುವುದಿಲ್ಲ. ಅದು ಸಿಕ್ಕಿರುವಾಗ ಅದರ ಸದುಪಯೋಗವನ್ನು ಈಗಲೇ ಮಾಡಿಕೊಳ್ಳುವವನನ್ನೇ **ವೇದಾಂತದಲ್ಲಿ ಧೀರ** ಎನ್ನುತ್ತಾರೆ. ಉದಾಹರಣೆಗೆ: ಮಾನವಜನ್ಮವು ಬಂದಿದೆ, ಈ ಜನ್ಮದಲ್ಲಿ ಆತ್ಮಜ್ಞಾನವನ್ನು ಮಾಡಿಕೊಳ್ಳುವ ಅವಕಾಶವನ್ನು ಭಗವಂತನು ಎಲ್ಲಾ ಮಾನವರಿಗೂ ಸಮವಾಗಿ ಕೊಟ್ಟಿರುತ್ತಾನೆ. ಹೀಗಾಗಿ ಈ ಜನ್ಮದಲ್ಲಿಯೇ ಆತ್ಮಜ್ಞಾನಪ್ರಾಪ್ತಿಗಾಗಿ ಪ್ರಯತ್ನಿಸುವವನೇ **ವೇದಾಂತದಲ್ಲಿ ಧೀರ**ನೆನಿಸುತ್ತಾನೆ. ಇದನ್ನು ಗೀತಾಚಾರ್ಯನಾದ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ (೫-೨೩) ಹೀಗೆ ಹೇಳಿರುತ್ತಾನೆ:

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥**

*ಕಾಮಕ್ರೋಧಗಳಿಂದ ಉಂಟಾದ ವೇಗವು ಸಕಲ ದುಃಖಗಳಿಗೂ ಕಾರಣವಾಗಿರುತ್ತದೆ. ಕಾಮಕ್ರೋಧಗಳೇ ಸಕಲ ಅನರ್ಥಗಳಿಗೂ ಹೇತುವಾಗಿದೆ. ಇದನ್ನು **ಈಗಲೇ** ಅಂದರೆ ಸಾಯುವುದಕ್ಕಿಂತ ಮುಂಚಿತವಾಗಿ ಈ ಜನ್ಮದಲ್ಲಿಯೇ ಪರಿಹರಿಸಿಕೊಳ್ಳುವವನೇ ಬುದ್ಧಿವಂತನಾಗುತ್ತಾನೆ; ಇವನೇ ಯುಕ್ತನೂ ಸುಖಿಯೂ ಆದ ಧೀರನಾದ ನರನೆನಿಸುತ್ತಾನೆ.*

ನಾಳೆ, ನಾಡಿದ್ದು, ಮುಂದಿನ ತಿಂಗಳು, ಮುಂದಿನ ವರ್ಷ—ಎನ್ನದೇ ಇಂದಿನಿಂದಲೇ ಕಾಮಕ್ರೋಧಾದಿದೋಷಗಳನ್ನು ಕೈಬಿಡುವುದಕ್ಕೆ ಹೆಚ್ಚಿನ ಪ್ರಯತ್ನವನ್ನು ಮಾಡುವವನೇ **ವೇದಾಂತದಲ್ಲಿ ಧೀರ**ನೆನಿಸುತ್ತಾನೆ (ಗೀತಾ ೫-೧೯):

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥**

*ಈಗಲೇ, ಬದುಕಿರುವಾಗಲೇ, ಈ ಜನ್ಮದಲ್ಲಿಯೇ ಯಾರು ಸಾಮ್ಯದಲ್ಲಿ ಮನಸ್ಸನ್ನು ಇಟ್ಟವರಾಗಿ, ಜನ್ಮವನ್ನು ಗೆದ್ದುಬಿಟ್ಟಿದ್ದಾರೆಯೋ ಅಂಥವರೇ ಧೀರರು; ಪರಬ್ರಹ್ಮವು ದೋಷರಹಿತವೂ ಸರ್ವಸಮವೂ ಆಗಿರುತ್ತದೆ. ಧೀರರಾದ ಜ್ಞಾನಿಗಳು ಅಂಥ ಸಾಮ್ಯಬ್ರಹ್ಮದಲ್ಲಿ ಸ್ಥಿತರಾಗಿರುತ್ತಾರೆ.*

ಮಾನವಜನ್ಮದಲ್ಲಿಯೇ ಅಂದರೆ ಈ ಜನ್ಮದಲ್ಲಿಯೇ ಯಾರು ತಮ್ಮ ಮನಸ್ಸನ್ನು ಪರಬ್ರಹ್ಮದಲ್ಲಿಯೇ ನೆಲೆಗೊಳಿಸಿ, ಜನ್ಮಮರಣಬಂಧನದಿಂದ ಮುಕ್ತರಾಗಿದ್ದಾರೆಯೋ, ಅವರೇ **ವೇದಾಂತದಲ್ಲಿ ಧೀರರು**. ನಾಳೆ, ನಾಡಿದ್ದು ಎನ್ನದೇ ಇಂದಿನಿಂದಲೇ ಬ್ರಹ್ಮಜ್ಞಾನಪ್ರಾಪ್ತಿಗಾಗಿ ಸಾಧನಚತುಷ್ಟಯಸಂಪನ್ನರಾಗಿ ಪ್ರಯತ್ನಿಸುವವರೇ ವೇದಾಂತದಲ್ಲಿ ಧೀರರೆನಿಸುತ್ತಾರೆ.

**ಇಂದಿನಿಂದಲೇ ಮೋಕ್ಷಾಪೇಕ್ಷಿಗಳು ಧೀರರಾಗುತ್ತಾರೆ**

# 19. ಭಗವದ್ಗೀತೆಯಲ್ಲಿ ಧೀರರು

ಶ್ರೀಮದ್ಭಗವದ್ಗೀತೆಯು ಸಕಲ ವೇದವೇದಾಂತಶಾಸ್ತ್ರಗಳ ಸಾರ. ಸಾಕ್ಷಾತ್ ಶ್ರೀಕೃಷ್ಣಭಗವಂತನ ನೇರಾದ ಉಪದೇಶಗಳೇ ಭಗವದ್ಗೀತೆ. ಸಕಲ ಜ್ಞಾನಿಗಳಿಂದಲೂ ಪೂಜಿಸಲ್ಪಡುವ ಪವಿತ್ರ ವೇದಾಂತಗ್ರಂಥವೆಂದರೆ ಭಗವದ್ಗೀತೆ. ಇಂಥ ಭಗವದ್ಗೀತೆಯಲ್ಲಿ (೨-೧೩) **ಧೀರನ** ಲಕ್ಷಣಗಳನ್ನು ಹೀಗೆ ತಿಳಿಸಿದೆ:

**ದೇಹಿನೋऽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ।**
**ತಥಾ ದೇಹಾಂತರಪ್ರಾಪ್ತಿಃ ಧೀರಸ್ತತ್ರ ನ ಮುಹ್ಯತಿ॥**

*ದೇಹಿಯಾದ ಆತ್ಮನಿಗೆ ಈ ದೇಹದಲ್ಲಿ ಹೇಗೆ ಬಾಲ್ಯ, ಕೌಮಾರ, ಯೌವನ ಮತ್ತು ಮುಪ್ಪುಗಳು ಬರುತ್ತವೆಯೋ, ಹೀಗೆಯೇ ಈ ಆತ್ಮನಿಗೆ ದೇಹಾಂತರದ ಪ್ರಾಪ್ತಿಯೂ ಆಗುತ್ತದೆ. ಆತ್ಮನಲ್ಲಿ ಮಾತ್ರ ಯಾವ ವಿಕಾರವೂ ಉಂಟಾಗಿರುವುದಿಲ್ಲ. ಹೀಗಾಗಿ* ***ಧೀರನಾದವನು*** *ಈ ವಿಷಯದಲ್ಲಿ ಮೋಹಗೊಳ್ಳುವುದಿಲ್ಲ.*

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ।**
**ಸಮದುಃಖಸುಖಂ ಧೀರಂ ಸೋऽಮೃತತ್ವಾಯ ಕಲ್ಪತೇ॥** ಗೀತಾ ೨-೧೫

*ಎಲೈ ಅರ್ಜುನನೇ, ಈ ಇಂದ್ರಿಯವಿಷಯಸಂಯೋಗವು ಯಾವ ಧೀರನಾದ ಪುರುಷನನ್ನು ವ್ಯಥೆಗೊಳಿಸಲಾರದೋ ಅವನು ಅಮೃತತ್ವವನ್ನು ಹೊಂದುತ್ತಾನೆ. ಸುಖದುಃಖಗಳಲ್ಲಿ ಸಮನಾಗಿರುವವನೇ* ***ಧೀರನು*** *ಎನಿಸುತ್ತಾನೆ.*

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ।**
**ತುಲ್ಯಪ್ರಿಯಾಪ್ರಿಯೋ ಧೀರಃ ತುಲ್ಯನಿಂದಾತ್ಮಸಂಸ್ತುತಿಃ॥**

ಭಗವದ್ಗೀತಾ ೧೪-೨೪

ವೇದಾಂತದಲ್ಲಿ ಧೀರನ ಹಾಗೂ ವಿವೇಕಿ ಸಾಧಕನ ಲಕ್ಷಣಗಳು ಹೀಗಿವೆ:

೧. **ಸಮದುಃಖಸುಖಃ ಧೀರಃ:** ಜೀವನದಲ್ಲಿ ಸುಖದುಃಖಗಳು ಬೇಡಬೇಡವೆಂದರೂ ಬರುತ್ತವೆ. ಇವು ಬಂದಾಗ ಸಮನಾಗಿರುವವನೇ ಧೀರನು.
೨. **ಸ್ವಸ್ಥಃ ಧೀರಃ:** ಸ್ವಾತ್ಮಾನಂದದಲ್ಲಿರುವವನೇ ಧೀರನು.
೩. **ಸಮಲೋಷ್ಟಾಶ್ಮಕಾಂಚನಃ:** ಮಣ್ಣುಮುದ್ದೆ, ಕಲ್ಲಿನ ಚೂರು, ಬಂಗಾರಗಳನ್ನು ಅನಾತ್ಮವೆಂದು ಸಮನಾಗಿ ಕಾಣುವವನೇ ಧೀರನು.
೪. **ತುಲ್ಯಪ್ರಿಯಾಪ್ರಿಯಃ:** ಪ್ರಿಯ ಅಪ್ರಿಯರಲ್ಲಿ ಸಮನಾದವನೇ ಧೀರನು.
೫. **ತುಲ್ಯನಿಂದಾತ್ಮಸಂಸ್ತುತಿಃ:** ನಿಂದಾಸ್ತುತಿಗಳಲ್ಲಿ ಯಾವಾತನು ಸಮನಾಗಿದ್ದು ವಿಕಾರಗೊಳ್ಳುವುದಿಲ್ಲವೋ ಅಂಥವನೇ ಧೀರ ಎನಿಸುತ್ತಾನೆ.

**ವಿವೇಕಿಯಾಗಿ ಸುಖದುಃಖಗಳಿಂದ ವಿಕಾರಗೊಳ್ಳದವನೇ ಧೀರನು**

# 20. ದುಃಖಸಾಗರವನ್ನು ದಾಟಿದವನೇ ಧೀರ

ಈ ಪ್ರಚಂಡ ಮನುಷ್ಯನು ತನ್ನ ಬುದ್ಧಿಸಾಮರ್ಥ್ಯದಿಂದ ಏನನ್ನು ಬೇಕಾದರೂ ಮಾಡಬಲ್ಲ, ಏನನ್ನು ಬೇಕಾದರೂ ಸಾಧಿಸಬಲ್ಲ! ಇಂದಿನ ಅದ್ಭುತ ವಿಜ್ಞಾನಯುಗದಲ್ಲಿ ಮಾನವನ ಸಾಧನೆಗಳನ್ನು ನೋಡಿದರೆ ಎಲ್ಲರಿಗೂ ಆಶ್ಚರ್ಯವಾಗುತ್ತದೆ! ಪಂಚಭೂತಗಳನ್ನು ಈ ಮಾನವನು ಗೆದ್ದಿರುತ್ತಾನೆ. ಈಗ ಈ ವಿಜ್ಞಾನಯುಗದಲ್ಲಿ ಮಾನವನು ಮಾಡುತ್ತಿರುವ ಅದ್ಭುತ ಸಾಧನೆಗಳನ್ನೂ, ಸಂಶೋಧನೆಗಳನ್ನೂ, ಆವಿಷ್ಕಾರಗಳನ್ನೂ ನೋಡುತ್ತಿದ್ದರೆ ನಮ್ಮೆಲ್ಲರಿಗೂ ಸಹಜವೆನಿಸಿಬಿಟ್ಟಿರುತ್ತದೆ. ಈಗ ನೂರು ವರ್ಷಗಳ ಹಿಂದಿನ, ಸಹಸ್ರಾರು ವರ್ಷಗಳ ಹಿಂದಿನ ಸಾಧನೆಗಳಿಗಿಂತ ಈಗ ಹತ್ತು ಪಟ್ಟು, ನೂರು ಪಟ್ಟು, ಸಹಸ್ರ ಪಟ್ಟು ಸಂಶೋಧನೆಗಳನ್ನು ಈ ಮಾನವನು ಮಾಡುತ್ತಿದ್ದಾನೆ.

ಹೌದು, ದಿಟ; ಆದರೆ ಇದಾವುದೂ ನಿಜವಾಗಿ ಸಾಧನೆಯೇ ಅಲ್ಲ. ಏಕೆಂದರೆ ಈ ಸಾಧನೆಗಳಿಂದ ಮನುಷ್ಯನಿಗೆ ಶೋಕಮೋಹಗಳನ್ನು ತಪ್ಪಿಸಲು ಸಾಧ್ಯವಾಗಿಲ್ಲ. ಕಾರ್‌ಗಳು, ಏರೋಪ್ಲೇನ್‌ಗಳು, ಹಡಗುಗಳು, ಟ್ರೈನುಗಳು, ಬಸ್‌ಗಳು—ಇವುಗಳಿಂದ ಮನುಷ್ಯರಿಗೆ ಪರಮಶಾಂತಿಯೆಂಬುದು ದೊರಕಲಾರದಲ್ಲವೇ? ಮೊಬೈಲ್ ಫೋನ್‌ಗಳು, ಫ್ರಿಜ್‌ಗಳು, ವಾಷಿಂಗ್ ಮೆಷಿನ್‌ಗಳು, ಓವನ್‌ಗಳು—ಇವುಗಳಿಂದಲೂ ಮಾನವರ ಶೋಕಮೋಹಗಳು ಹೋಗುತ್ತಿಲ್ಲ. ಕೋಟಿಗಟ್ಟಲೆ ಹಣ, ಬಂಗ್ಲೆಗಳು, ತೋಟಗಳು, ಅರಮನೆ—ಇವುಗಳಿಂದಲೂ ಮಾನವರ ದುಃಖಗಳು ತೊಲಗುವುದಿಲ್ಲ. ಆದರೆ ಆತ್ಮಜ್ಞಾನದಿಂದಲೇ ದುಃಖವು ತೊಲಗುತ್ತದೆ.

ಇನ್ನು, ಇಂದು ವೈದ್ಯಶಾಸ್ತ್ರ, ನೃತ್ಯಶಾಸ್ತ್ರ, ಸಂಗೀತಶಾಸ್ತ್ರಗಳೂ ದೊಡ್ಡದಾಗಿ ಬೆಳೆದಿವೆ. Onlineನಲ್ಲಿ ಈ ವಿದ್ಯೆಗಳೆಲ್ಲವೂ ಪ್ರಸಾರಗೊಳ್ಳುತ್ತಿವೆ. ಆದರೆ ಇದರಿಂದಲೂ ಪರಮಶಾಂತಿಯು ಮಾನವರಿಗೆ ದೊರೆಯುತ್ತಿಲ್ಲ. ಆದ್ದರಿಂದ ಈ ವಿದ್ಯೆಗಳನ್ನೆಲ್ಲ ಚೆನ್ನಾಗಿ ಬಲ್ಲವರಾಗಿದ್ದರೂ ಅವರನ್ನು **ವೇದಾಂತದಲ್ಲಿ ಧೀರರು** ಎಂದು ಕರೆಯಲು ಸಾಧ್ಯವಿಲ್ಲ.

ಶೋಕಮೋಹಗಳನ್ನು ಕಳೆಯಬಲ್ಲ ಬ್ರಹ್ಮವಿದ್ಯೆಯನ್ನೇ ಬಯಸುವವರೇ **ವೇದಾಂತದಲ್ಲಿ ಧೀರರು** ಎನಿಸುತ್ತಾರೆ. ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮವನ್ನೇ ತಾನೆಂದು ತಿಳಿಯಲು ಪ್ರಯತ್ನಿಸುತ್ತಿರುವ ಮಹಾತ್ಮನೇ **ವೇದಾಂತದಲ್ಲಿ ಧೀರನು**. ಪಾಂಚಭೌತಿಕವಾದ ದೇಹವು ತಾನಲ್ಲವೆಂದೂ ಪತ್ನೀಪುತ್ರಮಿತ್ರಾದಿಗಳು ತಾನಲ್ಲವೆಂದೂ ತಿಳಿದುಕೊಂಡು, ಪರಬ್ರಹ್ಮನೇ ತಾನೆಂದು ತಿಳಿಯಲು ತೀವ್ರವಾಗಿ ಬಯಸುವವನೇ **ವೇದಾಂತದಲ್ಲಿ ಧೀರ** ಎನಿಸುತ್ತಾನೆ.

**ಸಂಸಾರದ ದುಃಖವನ್ನು ಪರಿಹರಿಸಿಕೊಳ್ಳುವವನೇ ಧೀರನು**

# 21. ಅನನ್ಯಗುರುವೇ ಧೀರ

**‘ಧೀರ’** ಎಂಬೀ ವಿಶೇಷಣವು ಸಾಧಕನಾದ ಶಿಷ್ಯನಿಗೆ ಮಾತ್ರವಲ್ಲ, ಮತ್ತೇನೆಂದರೆ ಬೋಧಕನಾದ ಗುರುವಿಗೂ ಅನ್ವಯವಾಗುತ್ತದೆ. ಯೋಗ್ಯನಾದ ಶಿಷ್ಯನೂ ಧೀರನಾಗಿರಬೇಕು, ಉಪದೇಶಮಾಡುವ ಸದ್ಗುರುವೂ ಧೀರನಾಗಿರಬೇಕು. ಹೀಗಾದರೇ ಆ ಸದ್ಗುರುವಿನ ಉಪದೇಶವು ಶಿಷ್ಯರಿಗೆ ಸಪ್ರಯೋಜನವಾಗುತ್ತದೆ. ಧೀರನಲ್ಲದ ಅಂದರೆ ವಿವೇಕಿಯಲ್ಲದ ಅಂದರೆ ಬ್ರಹ್ಮನಿಷ್ಠನಾಗದ ಗುರುವಿನ ಉಪದೇಶವು ಶಿಷ್ಯರಿಗೆ ಪ್ರಯೋಜನವಾಗುವುದಿಲ್ಲ. ಹೀಗೆಂದು ಕಾಠಕೋಪನಿಷತ್ತಿನಲ್ಲಿ (೨-೮) ಮೃತ್ಯುವು ಈ ಕೆಳಗಿನ ಮಂತ್ರದಲ್ಲಿ ಹೇಳಿದ್ದಾನೆ:

**ನ ನರೇಣಾವರೇಣ ಪ್ರೋಕ್ತ ಏಷಃ**
**ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ।**
**ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ**
**ಅಣೀಯಾನ್ ಹಿ ಅತರ್ಕ್ಯಮಣುಪ್ರಮಾಣಾತ್॥**

*ಅವರನಾದ ಗುರುವಿನಿಂದ ಉಪದೇಶಿಸಲ್ಪಟ್ಟರೆ ಈ ಆತ್ಮನು ಸುಲಭವಾಗಿ ತಿಳಿಯಲ್ಪಡುವವನಲ್ಲ, ಏಕೆಂದರೆ ಇವನನ್ನು ಅನೇಕವಾದಿಗಳು ಅನೇಕ ರೀತಿಯಲ್ಲಿ ಚರ್ಚಿಸಿರುತ್ತಾರೆ. ಆದರೆ ಅನನ್ಯನಾದ ಗುರುವು ಧೀರನಾದ ಶಿಷ್ಯನಿಗೆ ಅನನ್ಯನಾಗಿ ತಿಳಿಸಿದರೆ ಆತ್ಮನಲ್ಲಿ ಗತಿಯು ಇರುವುದಿಲ್ಲ. ಆತ್ಮನನ್ನು ಕೇವಲ ಬುದ್ಧಿಯಿಂದ ಅಥವಾ ತರ್ಕದಿಂದ ಅರಿಯಲು ಸಾಧ್ಯವಿಲ್ಲ. ಏಕೆಂದರೆ ಆತ್ಮನು ಅಣುವಿಗಿಂತಲೂ ಅಣುವಾಗಿರುತ್ತಾನೆ.*

ಒಬ್ಬ ಸಾಮಾನ್ಯ ಪಂಡಿತನು ವೇದಾಂತಗಳನ್ನು ಶಿಷ್ಯರಿಗೆ ಹೇಳಿದರೆ ಅದರಿಂದ ಆತ್ಮಜ್ಞಾನವು ಹುಟ್ಟುವುದಿಲ್ಲ. ಏಕೆಂದರೆ ಗುರುವು ಧೀರನಲ್ಲ, ಎಂದರೆ, ಸ್ವತಃ ಅವನಿಗೇ ಆತ್ಮಜ್ಞಾನದ ಅನುಭವವು ಆಗಿರುವುದಿಲ್ಲ. ಮತ್ತು ಆತ್ಮಜ್ಞಾನವು ಅಷ್ಟೊಂದು ಸುಲಭವೂ ಅಲ್ಲ. ದೊಡ್ಡ ದೊಡ್ಡ ದಾರ್ಶನಿಕರುಗಳು ಹಾಗೂ ವಾದಿಗಳು ಆತ್ಮನನ್ನು ಇದ್ದಾನೆ, ಇಲ್ಲ, ಕರ್ತಾ, ಭೋಕ್ತಾ, ಶುದ್ಧ, ಅಶುದ್ಧ, ಸಗುಣ, ನಿರ್ಗುಣ, ವಿಕಾರಿ, ಅವಿಕಾರಿ—ಎಂದೆಲ್ಲಾ ತಿಳಿದಿರುತ್ತಾರೆ. ಆದ್ದರಿಂದ ಒಬ್ಬ ಸಾಮಾನ್ಯ ವಿದ್ವಾಂಸನಿಂದ ಆತ್ಮತತ್ತ್ವವನ್ನು ಶಿಷ್ಯರಿಗೆ ಸರಿಯಾಗಿ ತಿಳಿಸಲಾಗುವುದಿಲ್ಲ.

ಆದರೆ ಅನನ್ಯನಾದ ಅಂದರೆ ಸ್ವತಃ ಬ್ರಹ್ಮನಿಷ್ಠನಾದ ಸದ್ಗುರುವು ಉಪದೇಶಿಸಿದರೆ ಮುಮುಕ್ಷುಗಳಿಗೆ ಆತ್ಮತತ್ತ್ವವು ಸುಲಭವಾಗಿ ಅರ್ಥವಾಗಿಬಿಡುತ್ತದೆ. ಪರಬ್ರಹ್ಮವೇ ತಾನೆಂದು ತಿಳಿದು, ಜಿಜ್ಞಾಸುಗಳಿಗೂ ಅನನ್ಯತ್ವವನ್ನು ಉಪದೇಶಿಸುವ ಸದ್ಗುರುವೇ ಧೀರನಾದ ಆಚಾರ್ಯನು.

**ವೇದಾಂತಾಚಾರ್ಯನೂ ಧೀರನಾದ ಬ್ರಹ್ಮನಿಷ್ಠನೇ ಆಗಿರಬೇಕು**

# 22. ಕಾಳಿದಾಸ ಕಂಡ "ಧೀರ"

ಮಹಾಕವಿ ಕಾಳಿದಾಸನು ವೇದಾಂತಿಯೂ ಹೌದು ಎಂದು ಅವನ ಕಾವ್ಯಗಳಿಂದ ತಿಳಿಯುತ್ತದೆ. ಕಾಳಿದಾಸನ ಕಾವ್ಯನಾಟಕಗಳಲ್ಲಿ ಸಾಕಷ್ಟು ವೇದಾಂತ ವಿಷಯಗಳು ತುಂಬಿರುತ್ತವೆ. ಕಾಳಿದಾಸನು ರಸಿಕ ಕವಿಯೂ ಹೌದು, ವಿರಕ್ತ ಹಾಗೂ ಧೀರನಾದ ವೇದಾಂತಿಯೂ ಹೌದು. ಪರಮೇಶ್ವರನ ಭಕ್ತನಾದ ಕವಿಕುಲ ಗುರು ಕಾಳಿದಾಸನು ಪರಮೇಶ್ವರನನ್ನು 'ಧೀರ' ಎಂದು ಕರೆದಿರುತ್ತಾನೆ. ಆ ಕಥಾಸಂದರ್ಭವನ್ನೂ ಆ ಶ್ಲೋಕವನ್ನೂ ನಾವಿಲ್ಲಿ ನೋಡೋಣ:

ಕುಮಾರಸಂಭವದಲ್ಲಿ (೧-೫೯) ಬರುವ ಸಂದರ್ಭವಿದು. ಶಿವನು ತನ್ನ ಪತ್ನಿ ದಾಕ್ಷಾಯಿಣಿಯು ದಕ್ಷನ ಯಜ್ಞಕುಂಡದಲ್ಲಿ ಬಿದ್ದು ಆಹುತಿಯಾದ ಮೇಲೆ, ವಿರಕ್ತನಾಗಿ ತಪಸ್ಸನ್ನು ಮಾಡುತ್ತಾ ಕೈಲಾಸಪರ್ವತದಲ್ಲಿ ಏಕಾಕಿಯಾಗಿ ಧ್ಯಾನಮಗ್ನ ನಾಗಿದ್ದಾನೆ. ಆ ಸಂದರ್ಭದಲ್ಲಿ ಹಿಮವಂತನು ತನ್ನ ಪುತ್ರಿ ಗೌರಿಯನ್ನು ಎಂದರೆ ಉಮೆಯನ್ನು ಕರೆದುಕೊಂಡು ಬಂದು, ಪರಮಶಿವನ ಬಳಿ ಅವಳನ್ನು ಬಿಡುವುದ ಕ್ಕಾಗಿ ಕಾಯುತ್ತಿದ್ದಾನೆ. ಶಿವನು ಧ್ಯಾನದಿಂದ ಬಹಿರ್ಮುಖನಾದ ಮೇಲೆ ಹಿಮವಂತನು ಉಮೆಯನ್ನು ತೋರಿಸಿ "ಈ ನನ್ನ ಮಗಳನ್ನು, ಶಿವನೇ, ನಿನ್ನ ಸೇವೆಗಾಗಿ ನೀನು ಸ್ವೀಕರಿಸಿ ನನ್ನನ್ನು ಅನುಗ್ರಹಿಸು" ಎಂದು ಬೇಡುತ್ತಾನೆ. ಆ ಕೂಡಲೇ ಶಿವನು ಆ ಉಮೆಯನ್ನು ತನ್ನ ಸೇವೆಗಾಗಿ ಸ್ವೀಕರಿಸಿಬಿಡುತ್ತಾನೆ.

ಇದೇನಾಶ್ಚರ್ಯ! ಪರಮಶಿವನು ತಪಸ್ಸನ್ನು ಮಾಡುತ್ತಿರುವ ಮಹಾ ಯೋಗಿ. ಅಂಥವನು ಹೆಣ್ಣುಹುಡುಗಿಯನ್ನು ತನ್ನ ಜೊತೆಯಲ್ಲಿ ಇರಲು ಹೇಗೆ ಒಪ್ಪಿದನು? ಇದು ತಪ್ಪಲ್ಲವೇ? ಗಂಡಿನ ಜೊತೆಯಲ್ಲಿ ಹೆಣ್ಣು ಹುಡುಗಿಯಿದ್ದರೆ ಅವನೇನು ತಪಸ್ಸನ್ನು ಮಾಡಿಯಾನು? ಎಂಬ ಪ್ರಶ್ನೆಗೆ ಕಾಳಿದಾಸನ ಉತ್ತರ:

**ಪ್ರತ್ಯರ್ಥಿಭೂತಾಮಪಿ ತಾಂ ಸಮಾಧೇಃ**
**ಗಿರೀಶಕನ್ಯಾಂ ಗಿರಿಶೋಽನುಮೇನೇ।**
**ವಿಕಾರಹೇತೌ ಸತಿ ವಿಕ್ರಿಯಂತೇ**
**ಯೇಷಾಂ ನ ಚೇತಾಂಸಿ ತ ಏವ ಧೀರಾಃ॥**

ಕುಮಾರಸಂಭವ ೧-೫೯

*ತನ್ನ ತಪಸ್ಸಿಗೆ ಇವಳು ಅಡ್ಡಿ ಎಂದು ತಿಳಿದಿದ್ದರೂ ಶಿವನು ಉಮೆಗೆ ತನ್ನ ಜೊತೆಯಲ್ಲಿ ಇರಲು ಅನುಮತಿಯನ್ನು ಕೊಟ್ಟನು. ವಿಕಾರಗೊಳ್ಳುವುದಕ್ಕೆ ನಿಮಿತ್ತಗಳಿದ್ದರೂ ಯಾವಾತನ ಮನಸ್ಸು ವಿಕಾರಗೊಳ್ಳುವುದಿಲ್ಲವೋ ಅವನೇ ಧೀರನು. ಹೀಗಾಗಿ ಪರ ಶಿವನು ಧೀರನೆನಿಸುತ್ತಾನೆ. ಮನಸ್ಸಿನಲ್ಲಿ ವಿಕಾರಗೊಳ್ಳದಿರುವವನೇ ಧೀರನೆನಿಸುತ್ತಾನೆ.*

**ಮನಸ್ಸಿನ ವಿಕಾರಗಳನ್ನು ಗೆದ್ದವನೇ ಧೀರನು**

# 23. ಅಜ್ಞಾನದಿಂದಾಗುವ ಅನಾಹುತ

ಅಜ್ಞಾನದಿಂದಲೇ ಮಾನವರಿಗೆ ಸಕಲ ಅನರ್ಥಗಳು, ಅಜ್ಞಾನದಿಂದಲೇ ಜನ್ಮಮರಣ ಪ್ರಬಂಧಗಳು, ಅಜ್ಞಾನದಿಂದಲೇ ಸುಖದುಃಖಗಳು. ಆದ್ದರಿಂದ ಮಾನವನು ಏನಾದರೂ ಮಾಡಿ ಈ ಅಜ್ಞಾನವನ್ನು ನಾಶಮಾಡಿಕೊಳ್ಳಲೇಬೇಕು. ಇದಕ್ಕಾಗಿಯೇ ಈ ಶ್ರೇಷ್ಠವೂ ಪವಿತ್ರವೂ ಆದ ಮಾನವಜನ್ಮವು ನಮಗೆ ಪ್ರಾಪ್ತವಾಗಿರುತ್ತದೆ ಎಂದು ವೇದಾಂತಗಳು ಮತ್ತೆ ಮತ್ತೆ ಸಾರಿಸಾರಿ ಹೇಳುತ್ತಿವೆ.

ಸರಿ, ಅಜ್ಞಾನವೆಂದರೇನು? ಎಂದರೆ, ತಮ್ಮ ಪರಮಾರ್ಥಸ್ವರೂಪವನ್ನು ಸರಿಯಾಗಿ ತಿಳಿಯದಿರುವುದೇ ಅಜ್ಞಾನವು; ತಾನಲ್ಲದ ದೇಹಾದಿ ಅನಾತ್ಮವಸ್ತುಗಳನ್ನು ತಾನೆಂದು ತಪ್ಪಾಗಿ ತಿಳಿದಿರುವುದೇ ಅಜ್ಞಾನವು. ಜ್ಞಾನಾಭಾವ, ಸಂಶಯಜ್ಞಾನ, ಮಿಥ್ಯಾಜ್ಞಾನ—ಈ ಮೂರೂ **ಅಜ್ಞಾನ**ವೇ. ಇದನ್ನು ಕಳೆಯುವುದಕ್ಕಾಗಿಯೇ ಎಲ್ಲಾ ವೇದಾಂತಗಳೂ ಹೊರಟಿವೆ ಎಂದು ಶ್ರೀಶಂಕರರು ಹೇಳಿದ್ದಾರೆ. ಹೀಗೆ ಅಜ್ಞಾನಪರಿಹಾರಕ್ಕಾಗಿ ಯತ್ನಿಸುವವನೇ **ಧೀರ** ಎನಿಸುತ್ತಾನೆ. ಅಜ್ಞಾನದಿಂದಾಗಿರುವ ಅನರ್ಥಗಳೇನು? ಎಂಬುದಕ್ಕೆ ಶಂಕರರ ಭಾಷ್ಯ ಹೀಗೆ ಹೇಳಿದೆ:

**ಕಷ್ಟಾ ಖಲು ಸುರನರತಿರ್ಯಕ್‌ಪ್ರೇತಾದಿಷು ಸಂಸಾರದುಃಖಬಹುಲೇಷು ಪ್ರಾಣಿನಿಕಾಯೇಷು ಜನ್ಮಜರಾಮರಣರೋಗಾದಿ ಸಂಪ್ರಾಪ್ತಿಃ, ಅಜ್ಞಾನಾತ್ ॥** ಕೇನ ಭಾಷ್ಯ ೨-೫

*ಅಪ್ಪಾ, ಎಷ್ಟೊಂದು ಕಷ್ಟವಿದು! ಇದನ್ನು ವರ್ಣಿಸಲು ತುಂಬಾ ಸಂಕಟವಾಗುತ್ತದೆ! ಹೇಗೆಂದರೆ, ದೇವತೆಗಳಿಗೂ, ಮಾನವರಿಗೂ, ತಿರ್ಯಕ್‌ಜಂತುಗಳಿಗೂ, ಭೂತಪ್ರೇತಗಳಿಗೂ ಸಂಸಾರದ ದುಃಖಗಳಿಂದ ಕೂಡಿಕೊಂಡಿರುವ, ನರಳಾಡುತ್ತಿರುವಂಥ ಸಕಲ ಪ್ರಾಣಿಗಳಿಗೂ ಜನ್ಮ, ಮುಪ್ಪು, ರೋಗ, ಮರಣಾದಿಗಳು ಉಂಟಾಗುತ್ತಿವೆಯಲ್ಲ! ಇದು ಎಷ್ಟೊಂದು ಕಷ್ಟದ ವಿಷಯ! ಅಯ್ಯೋ ಇದನ್ನು ನೋಡಲಾಗದು, ಕೇಳಲಾಗದು, ಅನುಭವಿಸಲೂ ಆಗದಲ್ಲವೇ? ಇದಕ್ಕೆಲ್ಲ ಕಾರಣ ಎಂದರೆ, ಅಜ್ಞಾನ!*

ಕ್ರಿಮಿಕೀಟಗಳಿಂದ ಆರಂಭಿಸಿ, ಪಶುಪಕ್ಷಿಗಳು, ರಾಕ್ಷಸರು, ಮಾನವರು, ದೇವತೆಗಳು, ಸಿದ್ಧರು, ಗಂಧರ್ವರು, ಕಿಂಪುರುಷರು—ಎಲ್ಲರಿಗೂ ಜೀವನದಲ್ಲಿ ನೂರಾರು, ಸಹಸ್ರಾರು ರೀತಿಯ ದುಃಖಗಳು ಬರುತ್ತಲೇ ಇರುತ್ತವೆಯಲ್ಲವೇ? ಇವರೆಲ್ಲರಿಗೂ ಜನ್ಮ, ರೋಗ, ಮುಪ್ಪು, ಮರಣಾದಿಗಳು ಇದ್ದೇ ಇರುತ್ತವೆ. ದೇವತೆಗಳಿಗೂ ದುಃಖವಿದೆ ಎಂದ ಮೇಲೆ, ಇನ್ನು ಹುಲ್ಲುಮಾನವರ ವಿಷಯವನ್ನು ಹೇಳಬೇಕೆ? ಸರಿ, ಈ ದುಃಖಗಳಿಗೆಲ್ಲ ಕಾರಣ ಯಾವುದು? ಎಂದರೆ ಅಜ್ಞಾನ. ಇದನ್ನು ಪರಿಹರಿಸಿಕೊಳ್ಳಬೇಕೆಂದು ಯತ್ನಿಸುವವನೇ ಧೀರನು.

**ಜನ್ಮಮರಣದಿಂದ ಪಾರಾಗಬಯಸುವವನೇ ಧೀರನು**

# 24. ಧೀರನಾದ ನಚಿಕೇತ!

ಅನೇಕ ಸಾಧಕರು ಅನೇಕ ರೀತಿಯಲ್ಲಿ ಕಠಿಣ ಸಾಧನಗಳನ್ನು ಅನುಷ್ಠಾನ ಮಾಡುತ್ತಾ ಇರುತ್ತಾರೆ. ಉದಾಹರಣೆಗೆ: ಉಪವಾಸ, ಮೌನ, ವನವಾಸ, ಬ್ರಹ್ಮಚರ್ಯ, ಏಕಾಂತವಾಸ, ಅಹಿಂಸಾ, ಆಚಾರ್ಯೋಪಾಸನೆ, ಇಂದ್ರಿಯ ನಿಗ್ರಹ—ಇತ್ಯಾದಿ ಕಠಿಣ ಸಾಧನೆಗಳನ್ನು ಮಾಡುತ್ತಾ, ಇವರು ತಮ್ಮನ್ನು **ಧೀರ**ರೆಂದೇ ತಿಳಿದಿರುತ್ತಾರೆ. ಆಗಲಿ, ಸಂತೋಷ. ಏಕೆಂದರೆ ಈ ಸಾಧನಗಳನ್ನೆಲ್ಲ ಧೀರರು ಮಾತ್ರವೇ ಮಾಡಬಲ್ಲರೇ ಹೊರತು ಸಾಮಾನ್ಯರಲ್ಲ.

ಆದರೆ, ಸಾಧಕರೇ ತಾವೇ ತಮ್ಮನ್ನು ಧೀರರು ಎಂದು ತಿಳಿಯುವುದಕ್ಕಿಂತಲೂ ಬ್ರಹ್ಮನಿಷ್ಠರಾದ ವೇದಾಂತಾಚಾರ್ಯರಾದ ಸದ್ಗುರುಗಳು ಶಿಷ್ಯರನ್ನು **'ನೀವು ಧೀರರು'** ಎಂದು ಹೇಳಿದರೆ ಅದಕ್ಕೆ ಹೆಚ್ಚಿನ ಬೆಲೆ ಬರುತ್ತದೆಯಲ್ಲವೇ? ಭಕ್ತನು ತನ್ನನ್ನು ತಾನೇ 'ಭಕ್ತ' ಎನ್ನುವುದಕ್ಕಿಂತಲೂ, ಭಗವಂತನು **'ನೀನು ನನ್ನ ಭಕ್ತ'** ಎಂದರೆ ಹೆಚ್ಚಿನ ಮಹತ್ತ್ವ!

ಸರಿ, ಇಂಥ ಉದಾಹರಣೆ ಎಲ್ಲಾದರೂ ಇದೆಯೇ? ಎಂದರೆ ಇದೆ. ಎಲ್ಲಿ? ಎಂದರೆ, ಕಾಠಕೋಪನಿಷತ್ತಿನಲ್ಲಿ. ಬ್ರಹ್ಮವಿದ್ಯಾಚಾರ್ಯನಾದ ಮೃತ್ಯುದೇವತೆಯು ನಚಿಕೇತನನ್ನು ಕುರಿತು **"ನೀನು ಧೀರನಾಗಿದ್ದೀಯೆ"** ಎಂದು ಹೆಮ್ಮೆಯಿಂದ ಈ ಕೆಳಗಿನ (೨-೧೧) ಮಂತ್ರದಲ್ಲಿ ಸ್ತುತಿಸಿದ್ದಾನೆ:

**ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ**
**ಕ್ರತೋರನಂತ್ಯಮಭಯಸ್ಯ ಪಾರಮ್।**
**ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ**
**ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ॥**

*ಕಾಮದ ಆಪ್ತಿ, ಜಗತ್ತಿನ ಪ್ರತಿಷ್ಠೆ, ಯಜ್ಞದ ಹೆಚ್ಚಿನ ಫಲ, ಅಭಯದ ಪಾರ, ಹೆಚ್ಚಿನ ಗತಿ, ಪ್ರತಿಷ್ಠೆ—ಇದೆಲ್ಲವನ್ನೂ ಕಂಡು, ಎಲೈ ನಚಿಕೇತನೇ, ನೀನು ಇದೆಲ್ಲವನ್ನೂ ಕೈಬಿಟ್ಟು, ಆತ್ಮಜ್ಞಾನವನ್ನೇ ಬಯಸುವವನಾಗಿ* ***ಧೀರನಾಗಿದ್ದೀಯೆ!***

ಇದು ನಚಿಕೇತನ ಮಾತಲ್ಲ, ಮೃತ್ಯುದೇವತೆಯ ಮಾತು; ನೆನಪಿರಲಿ. ಎಲೈ ನಚಿಕೇತನೇ, ನೀನು ನಿಜವಾಗಿಯೂ ಧೀರನಾಗಿದ್ದೀಯೆ. ಏಕೆಂದರೆ ಕರ್ಮೋಪಾಸನೆಗಳಿಂದ ದೊರಕುವ ಸ್ವರ್ಗಲೋಕದ ಹಾಗೂ ಬ್ರಹ್ಮಲೋಕದ ಸಕಲ ಫಲಗಳನ್ನೂ ವಿವೇಕದಿಂದ ಕೈಬಿಟ್ಟಿರುತ್ತೀಯೆ. ಇವೆಲ್ಲವೂ ನಿಸ್ಸಾರ ಎಂದು ತಿಳಿದು, ಆತ್ಮಜ್ಞಾನದ ಫಲವನ್ನು ಅಂದರೆ ಮೋಕ್ಷವನ್ನೇ ನೀನು ಅಪೇಕ್ಷಿಸುತ್ತೀಯೆ. ಹೀಗಾಗಿ ನೀನು ಧೀರನಾದ ಮುಮುಕ್ಷುಸಾಧಕನಾಗಿದ್ದೀಯೆ.

**ಬ್ರಹ್ಮಲೋಕಫಲದಿಂದಲೂ ವಿರಕ್ತನಾದವನೇ ಧೀರ**

# 25. ಸಮಾಜದಲ್ಲಿ ಧೀರರಿವರು

ವೇದಾಂತದಲ್ಲಿ ಧೀರರ ಲಕ್ಷಣಗಳೇ ಬೇರೆ, ಲೋಕದಲ್ಲಿ ಧೀರರ ಲಕ್ಷಣಗಳೇ ಬೇರೆ. ಈ ಗ್ರಂಥದಲ್ಲಿ ವೇದಾಂತಗಳಲ್ಲಿ ಧೀರರ ಲಕ್ಷಣಗಳನ್ನು ತಿಳಿಸಿದೆ. ಇವರು **ವೇದಾಂತಗಳಲ್ಲಿ ಧೀರರೇ** ಹೊರತು ಲೋಕದೃಷ್ಟಿಯಿಂದಲ್ಲ. ಏಕೆಂದರೆ ಲೌಕಿಕ ಜನಗಳಿಗೆ ವೇದಾಂತದ ರುಚಿಯಾಗಲೀ ಮಹಿಮೆಗಳಾಗಲೀ ತಿಳಿದಿಲ್ಲ. ಆದ್ದರಿಂದಲೇ ಇವರು ವೇದಾಂತಿಗಳಲ್ಲ , ಲೌಕಿಕರಿವರು!

ಸರಿ, ಹಾಗಾದರೆ '**ಲೋಕದಲ್ಲಿ ಧೀರರು**' ಎಂದರೆ ಯಾರು? ಎಂಬುದನ್ನು ನೋಡೋಣ: ಕಡುಬಡತನದ ಮನೆಯಲ್ಲಿ ಹುಟ್ಟಿ, ಕಷ್ಟಪಟ್ಟು ಓದಿ, ಅಲ್ಲಿ ಇಲ್ಲಿ ಕೆಲಸಮಾಡುತ್ತಾ ಜೀವನ ಸಾಗಿಸುತ್ತಾ, ಬುದ್ಧಿವಂತನಾಗಿ M.S. ಮಾಡಿ, ಅಮೇರಿಕಾದಲ್ಲಿ ತಿಂಗಳಿಗೆ ೧೦,೦೦೦ ಡಾಲರ್ ಹಣವನ್ನು ಸಂಪಾದಿಸುತ್ತಾ, ಬೆಂಗಳೂರಿನಲ್ಲಿ ದೊಡ್ಡ ಬಂಗ್ಲೆಯನ್ನು ಕಟ್ಟಿಸಿ, ಅಲ್ಲಿ ತನ್ನ ತಂದೆತಾಯಿಗಳಿಗೆ ಸಕಲ ಸೌಕರ್ಯಗಳನ್ನೂ ಮಾಡಿಕೊಟ್ಟಿದ್ದರೆ ಅಂಥವನನ್ನು **ಲೋಕದಲ್ಲಿ ಧೀರನು** ಎಂದು ಸಮಾಜವು ಕರೆಯುತ್ತದೆ. ಹಳ್ಳಿಯಿಂದ ಬರಿಗೈಯ್ಯಲ್ಲಿ ಬೆಂಗಳೂರಿಗೆ ಬಂದು ವ್ಯಾಪಾರವನ್ನು ಮಾಡುತ್ತಾ ಕೋಟಿ ಕೋಟಿ ರೂಪಾಯಿಗಳನ್ನು ಸಂಪಾದಿಸುತ್ತಿದ್ದರೆ ಅಂಥವನನ್ನು **ಲೋಕದಲ್ಲಿ ಧೀರ** ಎಂದು ಕರೆಯುತ್ತಾರೆ.

ಸ್ವಲ್ಪವೇ ಓದಿದ್ದರೂ, ಜನಪ್ರಿಯನಾಯಕನಾಗಿ, ಮೆಲ್ಲಮೆಲ್ಲನೇ ಮೇಲು ಮೇಲಕ್ಕೆ ಏರುತ್ತಾ ಮುಖ್ಯಮಂತ್ರಿಯಾಗಿದ್ದಾನೆ ಎಂದರೆ ಅಂಥವನನ್ನು **ಲೋಕದಲ್ಲಿ ಧೀರನು** ಎನ್ನುತ್ತಾರೆ. ಬಡತನದಿಂದ ಮೇಲಕ್ಕೆ ಬಂದು ದೊಡ್ಡ ಶ್ರೀಮಂತನಾಗಿ ತುಂಬಾ ದಾನಧರ್ಮಗಳನ್ನು ಮಾಡುತ್ತಿದ್ದರೆ ಅಂಥವನನ್ನು **ಲೋಕದಲ್ಲಿ ಧೀರ** ಎನ್ನುತ್ತಾರೆ. ಸಣ್ಣ ಕೆಲಸದಿಂದ ಪ್ರಾರಂಭಿಸಿ ಮೆಲ್ಲಮೆಲ್ಲನೇ ದೊಡ್ಡ ಅಧಿಕಾರಿಯಾದರೆ ಅವನನ್ನು **ಲೋಕದಲ್ಲಿ ಧೀರ** ಎನ್ನುತ್ತಾರೆ. ಎಷ್ಟೇ ಬಡವನಾಗಿದ್ದರೂ, ತನ್ನ ಕುಟುಂಬದವರೆಲ್ಲರನ್ನೂ ಹೇಗೋ ಸಾಕುತ್ತಾ ಸಂತೋಷವಾಗಿದ್ದರೆ ಅಂಥವನನ್ನು **ಲೋಕದಲ್ಲಿ ಧೀರ** ಎನ್ನುತ್ತಾರೆ.

ಇನ್ನು ಬ್ರಾಹ್ಮಣನಾಗಿ ಹುಟ್ಟಿ, ಸ್ನಾನ ಸಂಧ್ಯಾ ಜಪ ತಪಾದಿಗಳನ್ನು ಶ್ರದ್ಧೆಯಿಂದ ಮಾಡುತ್ತಾ ಕೇವಲ ವೈದಿಕಕರ್ಮಾನುಷ್ಠಾನನಿಷ್ಠನಾಗಿದ್ದರೆ ಅಂಥವನನ್ನೂ **ಲೋಕದಲ್ಲಿ ಧೀರ** ಎನ್ನುತ್ತಾರೆ. ತಂದೆತಾಯಿಗಳ ಸೇವೆಗಾಗಿಯೇ ತಾನು ಮದುವೆಮಾಡಿಕೊಳ್ಳದೇ ವೇದಾಧ್ಯಯನಸಂಪನ್ನನಾಗಿದ್ದರೆ ಅವನನ್ನು **ಲೋಕದಲ್ಲಿ ಧೀರ** ಎನ್ನುತ್ತಾರೆ. ಆದರೆ ಇವರಾರಿಗೂ ವೇದಾಂತವಾಗಲೀ ಆತ್ಮಜ್ಞಾನವಾಗಲೀ ಬೇಕಾಗಿಲ್ಲವಾದ್ದರಿಂದ ಇವರಾರೂ **ವೇದಾಂತದಲ್ಲಿ ಧೀರರಲ್ಲ**! ಮೋಕ್ಷಾರ್ಥಿಗಳಲ್ಲದ ಇವರೆಲ್ಲರೂ **ವೇದಾಂತದಲ್ಲಿ ದೀನರೇ** ಆಗಿರುತ್ತಾರೆ.

**ಮುಮುಕ್ಷುಗಳಲ್ಲದ ಎಲ್ಲರೂ ದೀನರೇ ಹೊರತು ಧೀರರಲ್ಲ**

# 26. ಧೀರ ಶಂಕರರು

ಶ್ರೀಶಂಕರರ ಜೀವನವನ್ನು ನೋಡಿದರೆ ಯಾರಿಗಾದರೂ ಪರಮಾಶ್ಚರ್ಯವಾಗುತ್ತದೆ. ಶಿವಾಂಶಸಂಭೂತರಾದ ಶಂಕರರು ಬಾಲ್ಯದಲ್ಲಿಯೇ ಉಪನೀತರಾಗಿ, ಎಂಟನೆಯ ವಯಸ್ಸಿನಲ್ಲಿಯೇ ಸಂನ್ಯಾಸಿಗಳಾಗಿ, ಸರ್ವಸಂಗಪರಿತ್ಯಾಗಿಗಳಾಗಿ ಪರಿವ್ರಾಜಕರಾಗಿಬಿಟ್ಟರಲ್ಲ! ಅಬ್ಬಾ! ಇದಲ್ಲವೇ ಧೀರನ ಲಕ್ಷಣ?

**ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್ ।**
**ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ॥**

ಮೂರನೆಯ ವರ್ಷದಲ್ಲಿ ಚೂಡಾಕರ್ಮ, ಐದನೆಯ ವಯಸ್ಸಿನಲ್ಲಿ ಉಪನಯನ ಸಂಸ್ಕಾರ, ಎಂಟನೇ ವಯಸ್ಸಿನಲ್ಲಿ ಸಂನ್ಯಾಸ; ಎಂಟನೆಯ ವಯಸ್ಸಿನಲ್ಲಿ ಚತುರ್ವೇದಗಳ ಸಂಪೂರ್ಣ ಅಧ್ಯಯನ, ಹನ್ನೆರಡನೇ ವಯಸ್ಸಿಗೆ ಸಕಲ ಶಾಸ್ತ್ರಗಳಲ್ಲಿಯೂ ಪಾಂಡಿತ್ಯ, ಹದಿನಾರನೇ ವಯಸ್ಸಿನಲ್ಲಿ ಪ್ರಸ್ಥಾನತ್ರಯೀ ಗ್ರಂಥಗಳಿಗೆ ಭಾಷ್ಯರಚನೆ; ಮೂವತ್ತೆರಡನೆಯ ವಯಸ್ಸಿನವರೆಗೆ ಅಖಂಡ ಭಾರತವನ್ನು ಸಂಚರಿಸಿ ಧರ್ಮೋದ್ಧಾರಮಾಡಿದ ಶಂಕರರು ನಿಜವಾಗಿಯೂ ಧೀರರಲ್ಲವೇ?

ಶ್ರೀಶಂಕರರ ಜೀವಿತಕಾಲ ಕೇವಲ ಮೂವತ್ತೆರಡು ವರ್ಷಗಳು ಮಾತ್ರ. ಆದರೆ ಆ ಮೂವತ್ತೆರಡು ವರ್ಷಗಳಲ್ಲಿ ಶ್ರೀಶಂಕರರು ವೇದಾಂತಕ್ಷೇತ್ರದಲ್ಲಿ ಮುಮುಕ್ಷುಸಾಧಕರಿಗೋಸ್ಕರ ಮಾಡಿರುವ ಅನುಗ್ರಹ ಮಾತ್ರ ಪರಮಾದ್ಭುತ! ಶ್ರೀಶಂಕರರು ಭಗವದ್ಗೀತೆಗೆ ಭಾಷ್ಯವನ್ನು ಬರೆದು ಭಗವದ್ಗೀತೆಯ ಮಹಿಮೆಯನ್ನು ಜಗತ್ತಿಗೆ ತೋರಿಸಿ ಭಗವದ್ಗೀತೆಯನ್ನು ವಿಶ್ವಗೀತೆಯನ್ನಾಗಿ ಮಾಡಿದ ಧೀರರು! ಗೀತೆಯನ್ನು ಪ್ರಸ್ಥಾನತ್ರಯೀ ಗ್ರಂಥಗಳಲ್ಲಿ ಒಂದು ಎಂದು ಸಾರಿದ ಧೀರರು ಶಂಕರರು! ಮುಮುಕ್ಷು ಸಾಧಕರುಗಳಿಗೆ ಮೋಕ್ಷಕ್ಕೆ ರಾಜಮಾರ್ಗವನ್ನು ತಿಳಿಸಿದ ಧೀರರು ಶಂಕರರು. ಯತಿಗಳಿಗೆ ಈ ಸಂಸಾರದ ಅಸಾರತೆಯನ್ನು ತೋರಿಸಿ ಸಂನ್ಯಾಸಾಶ್ರಮದ ಗರಿಮೆಯನ್ನು ತಿಳಿಸಿದ ಧೀರರು ಶ್ರೀಶಂಕರರು.

ಕೇವಲ ಯಜ್ಞಯಾಗಾದಿ ಶ್ರೌತಸ್ಮಾರ್ತಕರ್ಮಗಳಿಂದ ಶಾಶ್ವತವಾದ ಮೋಕ್ಷವು ದೊರಕಲಾರದೆಂದೂ, ಆತ್ಮಜ್ಞಾನದಿಂದಲೇ ಮೋಕ್ಷವು ದೊರಕುತ್ತದೆಯೆಂದೂ ಸಾರಿಸಾರಿ ಹೇಳಿದ ಧೀರರು ಶಂಕರರು. ಕರ್ಮಗಳೆಲ್ಲವೂ ಕರ್ತೃತಂತ್ರ ಸಾಧನಗಳೆಂದೂ ಆತ್ಮಜ್ಞಾನವು ಮಾತ್ರ ವಸ್ತುತಂತ್ರಸಾಧನವೆಂದೂ ಉಪದೇಶಿಸಿದ ಧೀರರು ಶಂಕರರು. ಕರ್ಮೋಪಾಸನೆಗಳಿಂದ ದೊರಕುವ ಫಲಗಳೆಲ್ಲವೂ, ಬ್ರಹ್ಮಲೋಕಾಂತಫಲಗಳೆಲ್ಲವೂ ಅನಿತ್ಯವೆಂದೂ, ಬ್ರಹ್ಮಸ್ವರೂಪವಾದ ಮೋಕ್ಷವು ಮಾತ್ರವೇ ನಿತ್ಯವೆಂದೂ ಸಾರಿದ ಧೀರರೇ ಶ್ರೀಶಂಕರರು.

**ಧೀರಶಂಕರರ ಆದರ್ಶವನ್ನು ಮುಮುಕ್ಷುಗಳು ಪಾಲಿಸಬೇಕು**

## 27. ಇಂದೇ ಪ್ರಯತ್ನಿಸುವವನೇ ಧೀರ!

ಒಳ್ಳೆಯ ಕೆಲಸಗಳನ್ನು ಮಾಡಬೇಕಾದರೆ ನಾಳೆ, ನಾಡಿದ್ದು ಎಂದು ಮುಂದುಮುಂದಕ್ಕೆ ತಳ್ಳಬಾರದು. ಅದರಲ್ಲೂ ಆತ್ಮಜ್ಞಾನದ ವಿಷಯದಲ್ಲಂತೂ 'ನಾಳೆ' ಎನ್ನಲೇಬಾರದು. ಏಕೆಂದರೆ:

**ನ ಕಶ್ಚಿದಪಿ ಜಾನಾತಿ ಕಿಂ ಕಸ್ಯ ಶ್ವೋ ಭವಿಷ್ಯತಿ।**
**ಅತಃ ಶ್ವಃಕರಣೀಯಾನಿ ಕುರ್ಯಾದದ್ಯೈವ ಬುದ್ಧಿಮಾನ್॥**

*ನಾಳೆಯ ದಿನ ಯಾರಿಗೆ, ಎಲ್ಲಿ, ಏನಾಗುತ್ತದೆ? ಎಂಬುದನ್ನು ಯಾರೂ ತಿಳಿಯಲಾರರು. ಆದ್ದರಿಂದ ನಾಳೆಯ ದಿನ ಮಾಡಬೇಕಾದ್ದನ್ನು ಇಂದೇ, ಈಗಲೇ ಮಾಡಿಬಿಡಬೇಕು. ಇವನೇ ಬುದ್ಧಿವಂತ ಹಾಗೂ ಧೀರ!*

ವಿವೇಕಿಯಾದ ಧೀರನು ಇಂದಿನಿಂದಲೇ ಆತ್ಮಜ್ಞಾನಕ್ಕಾಗಿ ಪ್ರಯತ್ನಿಸಬೇಕು. ಇಂದು ಮಂಗಳವಾರ, ಇಂದು ಅಮಾವಾಸ್ಯೆ, ಇಂದು ಸಂಕ್ರಮಣ, ಇಂದು ಗ್ರಹಣ—ಎನ್ನುತ್ತಾ ಆತ್ಮಜ್ಞಾನದ ವಿಷಯವನ್ನು ಖಂಡಿತಾ ಮುಂದೂಡಬಾರದು. ಸಂಸಾರಚಕ್ರದಿಂದ ತನ್ನನ್ನು ತಪ್ಪಿಸಿಕೊಳ್ಳುವುದಕ್ಕೆ ಇಂದೇ **ಪರ್ವಕಾಲ** ಎಂದು ತಿಳಿದು ಸದ್ಗುರುಗಳಿಂದ ವೇದಾಂತಗಳನ್ನು ಅಧ್ಯಯನಮಾಡುತ್ತಾ, ಅರ್ಥವನ್ನೂ ತಿಳಿದು, ಅಜ್ಞಾನನಿವೃತ್ತಿಗಾಗಿ ಪ್ರಯತ್ನಿಸುವವನನ್ನೇ ವೇದಾಂತಗಳಲ್ಲಿ ಧೀರ, ವಿವೇಕಿ, ಬುದ್ಧಿವಂತ, ಪ್ರಾಜ್ಞ—ಎಂದೆಲ್ಲ ಕರೆದಿರುತ್ತಾರೆ.

ಏಕೆಂದರೆ, ನಾಳೆ ಎಂದರೆ ಮುಂದೆ ಏನು ಬೇಕಾದರೂ ಆಗಬಹುದಲ್ಲವೇ? ಆತ್ಮಜ್ಞಾನಪ್ರಾಪ್ತಿಗೆ ಇಂದೇ ಸುಮುಹೂರ್ತ, **ನಾಳೆ ಎಂದರೆ ಹಾಳು**! ಆತ್ಮಜ್ಞಾನವನ್ನು ಮಾಡಿಕೊಳ್ಳದೇ ಹೋದರೆ ಅದರಿಂದ ಮಾನವರಿಗೆ ಭರಿಸಲಾಗದ ನಷ್ಟವಾಗುತ್ತದೆ ಎಂದು ಈ ಮಂತ್ರವು ಧೈರ್ಯವಾಗಿ ಹೇಳುತ್ತಿದೆ:

**ಇಹ ಚೇದವೇದೀದ್ ಅಥ ಸತ್ಯಮಸ್ತಿ**
**ನ ಚೇದಿಹಾವೇದೀತ್ ಮಹತೀ ವಿನಷ್ಟಿಃ।**
**ಭೂತೇಷು ಭೂತೇಷು ವಿಚಿತ್ಯ ಧೀರಾಃ**
**ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ॥** ಕೇನ ೨-೫

*ಈ ಲೋಕದಲ್ಲಿಯೇ, ಇಲ್ಲಿಯೇ, ಈಗಲೇ ಆತ್ಮನನ್ನು ತಿಳಿದರೆ ಅಂಥವನಿಗೆ ಸತ್ಯವಾದ ಪುರುಷಾರ್ಥವು ದೊರಕುತ್ತದೆ; ನಾಳೆ ಎನ್ನುತ್ತಾ ಹೋದರೆ, ಅಂಥವನಿಗೆ ಮಹತ್ತಾದ ನಷ್ಟವು ಉಂಟಾಗುತ್ತದೆ. ಆತ್ಮಜ್ಞಾನವನ್ನು ಪಡೆದ ಧೀರರು ಇಲ್ಲಿಯೇ ಈಗಲೇ ಮುಕ್ತರಾಗಿ ಅಮೃತತ್ವವನ್ನು ಹೊಂದುತ್ತಾರೆ.*

**ಧೀರರು ಇಂದಿನಿಂದಲೇ ವೇದಾಂತಾಭ್ಯಾಸ ಮಾಡಬೇಕು**

# 28. ಬ್ರಹ್ಮವಿದ್ಯಾರ್ಥಿಯೇ ಧೀರ

ಈ ಗ್ರಂಥದಲ್ಲಿ **‘ಧೀರ’** ಎಂದರೆ **‘ವೇದಾಂತದಲ್ಲಿ ಧೀರ’** ಎಂದೇ ಅರ್ಥ ಮಾಡಿಕೊಳ್ಳಬೇಕು. ಅನಾತ್ಮವಸ್ತುಗಳನ್ನೂ ಅನಾತ್ಮವಿದ್ಯೆಗಳನ್ನೂ ಹೆಮ್ಮೆಯಿಂದ ತಿರಸ್ಕರಿಸಿ, ಮೋಕ್ಷವನ್ನೇ ಹೊಂದುವುದಕ್ಕಾಗಿ ಬ್ರಹ್ಮವಿದ್ಯೆಯೊಂದನ್ನೇ ಬಯಸುವವನಿಗೆ **‘ಧೀರ’** ಎಂದು ಹೆಸರು. ಮೃತ್ಯುದೇವತೆಯು ನಚಿಕೇತನನ್ನು ಹೊಗಳುತ್ತಾ “ನೀನು ಧೀರನಪ್ಪ, ಏಕೆಂದರೆ ನೀನು ವಿವೇಕದಿಂದ ಸಕಲ ಕಾಮಭೋಗಗಳನ್ನೂ ತಿರಸ್ಕರಿಸಿ ಮೋಕ್ಷವಿದ್ಯೆಯನ್ನೇ ನನ್ನಿಂದ ಕೇಳುತ್ತಿದ್ದೀಯಲ್ಲ” ಎಂದಿರುತ್ತಾನೆ. ಕಾಠಕೋಪನಿಷತ್ತಿನ ಆ ಮಂತ್ರವನ್ನು ನೋಡೋಣ:

**ದೂರಮೇತೇ ವಿಪರೀತೇ ವಿಷೂಚೀ**
**ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ।**
**ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ**
**ನ ತ್ವಾ ಕಾಮಾ ಬಹವೋಽಲೋಲುಪಂತ॥**

**ಕಾಠಕೋಪನಿಷತ್ ೧-೨-೪**

*ಅವಿದ್ಯಾ ಮತ್ತು ವಿದ್ಯಾ; ಇವೆರಡೂ ಅತ್ಯಂತ ವಿರುದ್ಧ ದಿಕ್ಕುಗಳಲ್ಲಿ ಇರುತ್ತವೆ. ಕಾಮಭೋಗಗಳೆಲ್ಲವೂ ಅವಿದ್ಯಾಮಾರ್ಗ; ಆದರೆ ಮೋಕ್ಷವೊಂದೇ ವಿದ್ಯಾಮಾರ್ಗ. ನೀನು ಎಲೈ, ನಚಿಕೇತನೇ, ಬ್ರಹ್ಮವಿದ್ಯೆಯನ್ನೇ ಬಯಸುವವನಾಗಿ ನನ್ನಲ್ಲಿಗೆ ಬಂದಿರುತ್ತೀಯೆ. ಹೀಗಾಗಿ ನೀನು ನಿಜವಾಗಿಯೂ ಧೀರನಾಗಿದ್ದೀಯೆ; ಏಕೆಂದರೆ ನಿನ್ನನ್ನು ಈ ಬಹಳ ಕಾಮಭೋಗಗಳು ತಮ್ಮ ಕಡೆಗೆ ಎಳೆಯಲಾಗಲಿಲ್ಲ, ಅಂದರೆ ನೀನು ಯಾವ ಅನಾತ್ಮಕಾಮಭೋಗಗಳೆಂಬ ಪಾಶಕ್ಕೂ ಸಿಕ್ಕಿಕೊಳ್ಳಲಿಲ್ಲ.*

ಎಂಥ ಮನುಷ್ಯನೇ ಆಗಿರಲಿ, ಅಂದರೆ ಸಂನ್ಯಾಸಿಯೇ ಆಗಿರಲಿ, ಅಧ್ಯಾತ್ಮ ಸಾಧಕನೇ ಆಗಿರಲಿ, ಅಂಥವನನ್ನೂ ಕಾಮಪಾಶಗಳು ತಮ್ಮ ಕಡೆಗೆ ಎಳೆದು ಕೊಂಡುಬಿಡುತ್ತವೆ. ಹೀಗಾಗಿ ಅಂಥವರಾರೂ ಧೀರರಲ್ಲ; ಆದರೆ ನೀನು ಮಾತ್ರ ಕಾಮಪಾಶಗಳಿಗೆ ಸಿಕ್ಕಿಕೊಳ್ಳದೇ ಮೋಕ್ಷವೊಂದನ್ನೇ ಬಯಸುವವನಾಗಿ ಬ್ರಹ್ಮವಿದ್ಯೆಗಾಗಿ ನನ್ನಲ್ಲಿಗೆ ಬಂದಿದ್ದೀಯೆ. ಇದರಿಂದ ನನಗೆ ತುಂಬಾ ಸಂತೋಷವಾಗಿದೆ ಎಂದು ಯಮನು ನಚಿಕೇತನಿಗೆ ಹೆಮ್ಮೆಯಿಂದ ಹೇಳುತ್ತಿದ್ದಾನೆ.

**ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ**, ನಚಿಕೇತನೇ, ನಾನು ನಿನ್ನನ್ನು **ಬ್ರಹ್ಮವಿದ್ಯಾಭೀಪ್ಸಿ** ಎಂದು ತಿಳಿದಿದ್ದೇನೆ. **ಅವಿದ್ವದ್‌ಬುದ್ಧಿಪ್ರಲೋಭಿನಃ ಕಾಮಾಃ ಅಪ್ಸರಃಪ್ರಭೃತಯೋ ಬಹವೋಽಪಿ ತ್ವಾಂ ನ ಅಲೋಲುಪಂತ, ಅತಃ ವಿದ್ಯಾರ್ಥಿನಂ ಶ್ರೇಯೋಭಾಜನಂ ತ್ವಾಂ ಮನ್ಯೇ**: ಶ್ರೀಶಂಕರರ ಭಾಷ್ಯ.

**ಬ್ರಹ್ಮವಿದ್ಯೆಯೊಂದನ್ನೇ ಅಪೇಕ್ಷಿಸುವವನು ಧೀರನು**

# 29. ಧೀರರಿಗೇ ಬ್ರಹ್ಮವಿದ್ಯಾ

ಪ್ರಪಂಚದಲ್ಲಿರುವ ಸಕಲ ವಿದ್ಯೆಗಳನ್ನೂ ವೇದಾಂತದಲ್ಲಿ **ಪರಾವಿದ್ಯಾ** ಮತ್ತು **ಅಪರಾವಿದ್ಯಾ** ಎಂದು ಎರಡಾಗಿ ವಿಂಗಡಿಸಿರುತ್ತಾರೆ. ಭೇದವನ್ನೇ ಉಪದೇಶಿಸುವ ಎಲ್ಲಾ ವಿದ್ಯೆಗಳನ್ನೂ **ಅಪರಾವಿದ್ಯಾ** ಎಂದೂ, ಪರಬ್ರಹ್ಮವನ್ನೇ ಉಪದೇಶಿಸುವ ವಿದ್ಯೆಯನ್ನು **ಪರಾವಿದ್ಯಾ** ಎಂದೂ ವೇದಾಂತದಲ್ಲಿ ತಿಳಿಸಿದೆ. ಅಪರಾವಿದ್ಯೆಗಳಲ್ಲಿಯೇ ಮುಳುಗಿರುವವರನ್ನು ಮೂಢರು ಎಂದೂ, ಪರಾವಿದ್ಯೆಯನ್ನು ಹೊಂದುವವನನ್ನು **ಧೀರ** ಎಂದೂ ಕರೆದಿದೆ.

ಮುಂಡಕೋಪನಿಷತ್ತಿನ ಈ ಮಂತ್ರವನ್ನು ನೋಡೋಣ:

**ಅಥ ಪರಾ, ಯಯಾ ತದಕ್ಷರಮಧಿಗಮ್ಯತೇ, ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಮ್। ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ॥** ಮುಂಡಕೋಪನಿಷತ್ ೧-೧-೬

*ದೃಶ್ಯವಲ್ಲದ, ಗ್ರಾಹ್ಯವಲ್ಲದ, ಗುಣಗಳಿಲ್ಲದ, ಇಂದ್ರಿಯಗಳೂ ಇಲ್ಲದ, ನಿತ್ಯವೂ ವಿಭುವೂ ಸರ್ವಗತವೂ ಆದ, ಸೂಕ್ಷ್ಮವೂ ಆದ, ನಾಶವಿಲ್ಲದ, ಜಗತ್ಕಾರಣವಾದ ಅಕ್ಷರವೆಂಬ ಪರಬ್ರಹ್ಮವನ್ನು ತಿಳಿಸುವ ವಿದ್ಯೆಗೇ **ಪರಾವಿದ್ಯಾ** ಎಂದು ಹೆಸರು. ಈ ಪರಾವಿದ್ಯೆಗೆ ಧೀರರೇ ಅಧಿಕಾರಿಗಳು.*

ಪರಾವಿದ್ಯೆಯ ಮೂಲಕ ಪರಬ್ರಹ್ಮವನ್ನೇ ತಿಳಿದುಕೊಂಡು ಧೀರರು ಕೃತಕೃತ್ಯರಾಗುತ್ತಾರೆ. ಪರಬ್ರಹ್ಮವು ನಿರ್ಗುಣವೂ ನಿರುಪಾಧಿಕವೂ ನಿರವಯವಸ್ವರೂಪವೂ ಪ್ರತ್ಯಗಾತ್ಮವೂ ಆಗಿರುತ್ತದೆ. ಇಲ್ಲಿ ಜೀವೇಶ್ವರಭೇದಕ್ಕೆ ಅವಕಾಶವೇ ಇಲ್ಲ. ಇದು ಅದ್ವೈತಾತ್ಮದರ್ಶನ, ಇದು ಅಭೇದದರ್ಶನ, ಇದು ಸರ್ವಾತ್ಮಭಾವ ದರ್ಶನ. ಇದು ಧೀರರಿಗೆ ಮಾತ್ರವೇ ಅರ್ಥವಾಗುತ್ತದೆ, ಅನುಭವಕ್ಕೂ ಬರುತ್ತದೆ. ಈ ಅದ್ವೈತದರ್ಶನದಲ್ಲಿ ಎಲ್ಲರೂ ಒಂದೇ. ಇದು ಅರ್ಥವಾಗುವುದು ತುಂಬಾ ಸುಲಭವೇ ಆದರೂ ಸಂಸ್ಕಾರರಹಿತರಾದ ಅವಿವೇಕಿಗಳಿಗೆ ಕಷ್ಟವಾಗಿರುತ್ತದೆ.

ಆದರೆ ಯಾರು ವಿವೇಕಿಗಳೋ, ಯಾರಿಗೆ ಚಿತ್ತಶುದ್ಧಿಯಾಗಿರುತ್ತದೆಯೋ ಅಂಥ ಧೀರರಿಗೆ ಶ್ರೇಯಸ್ಸು ಬೇಕು, ಪ್ರೇಯಸ್ಸು ಬೇಡವೇ ಬೇಡ. ಇವರೇ ವೇದಾಂತದಲ್ಲಿ **ಧೀರರು** ಎನಿಸುತ್ತಾರೆ. ಭೇದಜ್ಞಾನವನ್ನು ಕೈಬಿಟ್ಟು, ಅಭೇದ ಜ್ಞಾನವನ್ನೇ ಬಯಸುವ ವಿವೇಕಿಗಳಿಗೇ ಧೀರರು ಎಂದು ಹೆಸರು. **ತದವ್ಯಯಂ ಪರಿಪಶ್ಯಂತಿ ಧೀರಾಃ,** ನಾಶವಿಲ್ಲದ ಆತ್ಮನನ್ನೇ ಕಾಣುವವರೇ ಧೀರರು. ಇಲ್ಲಿ ಧೀರರು ಎಂದರೆ ವಿವೇಕವುಳ್ಳವರು ಎಂದರ್ಥ.

**ಅಭೇದಜ್ಞಾನಸಂಪನ್ನರೇ 'ಧೀರರು' ಎನಿಸುತ್ತಾರೆ**

# 30. ವೈರಾಗ್ಯಸಂಪನ್ನನೇ ಧೀರನು

ವೇದಾಂತದಲ್ಲಿ ಧೀರನೆಂದರೆ ಅವನು ಸಂನ್ಯಾಸಿಯೇ ಆಗಿರಬೇಕು, ಗೃಹಸ್ಥನು ಆಗಿರಲೇಬಾರದು ಎಂದರ್ಥವಲ್ಲ. ತ್ಯಾಗಿಯು ಧೀರನಾಗದಿರಬಹುದು, ಏಕೆಂದರೆ ತ್ಯಾಗವೆಂಬುದು ಬಾಹ್ಯಸಾಧನವಾಗಿರುತ್ತದೆ. ತನ್ನ ಸಂಪತ್ತುಗಳನ್ನೆಲ್ಲ ಬೇರೆಯವರಿಗೆ ದಾನಮಾಡಿಬಿಟ್ಟಮಾತ್ರಕ್ಕೆ ಅವನನ್ನು ಧೀರನು ಎಂದು ಕರೆಯಲಾಗುವುದಿಲ್ಲ. ಅಥವಾ ಸಕಲ ಭೋಗಸಂಪತ್ತುಗಳನ್ನು ಉಳ್ಳವನಾದ ಮಾತ್ರಕ್ಕೂ ಅವನನ್ನು ಧೀರನು ಎಂದು ಕರೆಯಲಾಗುವುದಿಲ್ಲ.

ಹಾಗಾದರೆ ಧೀರನು ಎಂದರೆ ಏನರ್ಥ, ಧೀರರು ಎಂದರೆ ಯಾರು? ಎಂದರೆ, ಮನಸ್ಸಿನಲ್ಲಿ ವಿರಕ್ತನಾದವರೇ ಧೀರರು. ಮನಸ್ಸಿನಲ್ಲಿ ಸಹಜವಾದ ವೈರಾಗ್ಯವಿದ್ದರೆ ಅಂಥವರನ್ನೇ ವೇದಾಂತದಲ್ಲಿ ಧೀರರು ಎಂದು ಕರೆಯುತ್ತಾರೆ. ಅನಾತ್ಮಭೋಗಗಳಿಂದ ದೂರನಾಗಿರುವವನೇ ಧೀರನಾದರೂ, ಅನಾತ್ಮಭೋಗಗಳಿಂದ ವಿರಕ್ತನಾಗಿರುವವನೂ ಧೀರನೆನಿಸುತ್ತಾನೆ. ಧೀರನೆಂದರೆ ತನ್ನ ಸಂಪತ್ತುಗಳನ್ನು ಬೀದಿಗೆ ಎಸೆಯುವವನು ಎಂದರ್ಥವಲ್ಲ , ಅಥವಾ ಕಂಡಕಂಡವರಿಗೆಲ್ಲ ತನ್ನ ವಸ್ತುಗಳನ್ನು ಕೊಡುವವನು ಎಂದರ್ಥವೂ ಅಲ್ಲ. ಮತ್ತೇನೆಂದರೆ, ಈ ಭೋಗವಸ್ತುಗಳೆಲ್ಲವೂ ವಿಕಾರಿಗಳೂ ನಶ್ವರವೂ ಆಗಿರುವುದರಿಂದ ಇವುಗಳಿಂದ ಮೋಕ್ಷವು ಸಿಗಲಾರದು ಎಂಬ ವಿವೇಕವುಳ್ಳವನೇ ಧೀರನು.

ಕೆಲವರು ನಿಜವಾದ ಧೀರರೇ ಆಗಿದ್ದರೂ ಅವರ ಪ್ರಾರಬ್ಧಕ್ಕೆ ತಕ್ಕಂತೆ ಅವರಿಗೆ ಅರಮನೆ, ಸುವರ್ಣದ ರಾಶಿಗಳು, ಕಾರ್‌ಗಳು, ಸಮೃದ್ಧವಾಗಿ ಹಣ— ಎಲ್ಲವೂ ಇರಬಹುದು. ಇವುಗಳಿದ್ದ ಮಾತ್ರಕ್ಕೆ ಅವರನ್ನು ಧೀರರಲ್ಲ ಎಂದು ಕರೆಯಬಾರದು. ಶ್ರೀಮಂತರಾಗಿರುವುದು ಅವರ ಪ್ರಾರಬ್ಧ, ಆದರೆ ಅದರಲ್ಲಿಯೇ ಮುಳುಗದೇ, ಅದರಲ್ಲಿ ಹೆಚ್ಚಿನ ಆಸಕ್ತಿಯಾಗಲೀ ತನ್ಮಯತೆಯಾಗಲೀ ಇಲ್ಲದಿರುವುದೇ **ಧೀರತನ**. ಮನಸ್ಸಿನಲ್ಲಿ ಯಾವಾಗಲೂ ಆತ್ಮಜ್ಞಾನವನ್ನೇ ಹೊಂದಬೇಕೆಂಬ ತೀವ್ರತೆಯನ್ನುಳ್ಳವನೇ ಧೀರನು. ಇನ್ನುಳಿದ ವಿಷಯಗಳೆಲ್ಲವೂ ಗೌಣವಾಗಿರುತ್ತವೆ. ಇದನ್ನೇ ಶ್ರೀಶಂಕರರು ತಮ್ಮ **"ಭಜಗೋವಿಂದಂ"** ಸ್ತೋತ್ರದಲ್ಲಿ ಹೀಗೆ ಹೇಳಿದ್ದಾರಲ್ಲವೇ?

**ಯೋಗರತೋ ವಾ ಭೋಗರತೋ ವಾ**
**ಸಂಗರತೋ ವಾ ಸಂಗವಿಹೀನಃ।**
**ಯಸ್ಯ ಬ್ರಹ್ಮಣಿ ರಮತೇ ಚಿತ್ತಂ**
**ನಂದತಿ ನಂದತಿ ನಂದತ್ಯೇವ॥**

**ವಿವೇಕಿಮನಸ್ಸೇ ಧೀರನಿಗೆ ಮುಖ್ಯವಾದ ಸಂಪತ್ತು**

## 31. ಅಧ್ರುವವನ್ನು ಬಯಸದವರೇ ಧೀರರು

ಶ್ರೀಮಂತರು, ಧನಿಕರು, ಮಂತ್ರಿಗಳು, ಶತಾಯುಷಿಗಳು, ಘನ ವಿದ್ವಾಂಸರುಗಳು, ಮಹಾಮೇಧಾವಿಗಳು, ಶತಾವಧಾನಿಗಳು, ನಿಪುಣವೈದ್ಯರು, ದೊಡ್ಡ ದೊಡ್ಡ ವಿಜ್ಞಾನಿಗಳು—ಇವರೆಲ್ಲರೂ ಲೋಕದ ದೃಷ್ಟಿಯಿಂದ ಧೀರರೇ ಹೌದು. ಆದರೆ ವೇದಾಂತದ ದೃಷ್ಟಿಯಿಂದ ಇವರಾರೂ ಧೀರರಲ್ಲ. ಏಕೆಂದರೆ ಇವರುಗಳೆಲ್ಲರೂ ಅಧ್ರುವವಾದ ಅಂದರೆ ಅನಿತ್ಯವಾದ ಸಂಪತ್ತುಗಳನ್ನೇ ಹೊಂದಿದವರಾಗಿ ಅನಿತ್ಯವಸ್ತುಗಳನ್ನೇ ಪರಮಪುರುಷಾರ್ಥವೆಂದು ತಿಳಿದಿರುತ್ತಾರೆ. ಇವರಿಗೆ ಧ್ರುವವಾದ ಮೋಕ್ಷದ ಕಲ್ಪನೆಗಳೇ ಇಲ್ಲವಲ್ಲ!

ಹಾಗಾದರೆ ವೇದಾಂತದಲ್ಲಿ ಧೀರರು ಯಾರು? ಎಂದರೆ, ಅಧ್ರುವವಾದ, ಕ್ಷಣಿಕವಾದ, ವಿಕಾರಿಯಾದ, ಅನಿತ್ಯವಸ್ತುಗಳನ್ನು ಬಯಸದೇ; ನಿತ್ಯವೂ, ಧ್ರುವವೂ, ಶಾಂತವೂ, ಶಿವವೂ, ಪರಮಾನಂದಸ್ವರೂಪವೂ, ಬ್ರಹ್ಮಸ್ವರೂಪವೂ ಆದ ಮೋಕ್ಷವನ್ನೇ ಬಯಸುವವರು **ವೇದಾಂತದಲ್ಲಿ ಧೀರರು** ಎನಿಸುತ್ತಾರೆ. ಇದನ್ನು ಮೃತ್ಯುದೇವನು ಕಾಠಕೋಪನಿಷತ್ತಿನಲ್ಲಿ (೪-೨) ಹೀಗೆ ಹೇಳಿರುತ್ತಾನೆ:

**ಅಥ ಧೀರಾ ಅಮೃತತ್ವಂ ವಿದಿತ್ವಾ**
**ಧ್ರುವಮಧ್ರುವೇಷು ಇಹ ನ ಪ್ರಾರ್ಥಯಂತೇ ॥**

*ವಿವೇಕವಿಲ್ಲದ ಬಾಲರು ಬಾಹ್ಯ ಅನಾತ್ಮಭೋಗಗಳನ್ನೇ ಬಯಸುತ್ತಾರೆ; ಆದರೆ ಧೀರರು ಧ್ರುವವಾದ ಅಮೃತತ್ವವನ್ನೇ ಬಯಸುವವರಾಗಿ, ಅಧ್ರುವವಾದ ಎಂದರೆ ಅನಿತ್ಯವಾದ ಫಲಗಳನ್ನು ಬಯಸುವುದಿಲ್ಲ.*

ಇಲ್ಲಿ ಶ್ರೀಶಂಕರರು ತಮ್ಮ ಭಾಷ್ಯದಲ್ಲಿ **ಧೀರಾಃ ವಿವೇಕಿನಃ ಪ್ರತ್ಯಗಾತ್ಮಸ್ವರೂಪಾವಸ್ಥಾನಲಕ್ಷಣಮ್ ಅಮೃತತ್ವಂ ಧ್ರುವಂ ವಿದಿತ್ವಾ, ಕೂಟಸ್ಥಮ್ ಅವಿಚಾಲ್ಯಮ್ ಅಮೃತತ್ವಂ ವಿದಿತ್ವಾ** ಎಂದು ಬರೆದಿರುತ್ತಾರೆ. ವಿವೇಕಿಗಳಾದ ಧೀರರು ಪ್ರತ್ಯಾಗಾತ್ಮಸ್ವರೂಪಾವಸ್ಥಾನರೂಪವಾದ ಧ್ರುವವಾದ ಕೂಟಸ್ಥವಾದ, ಬದಲಾವಣೆಯಾಗದ ಅಮೃತತ್ವವನ್ನು ಬಯಸುತ್ತಾರೆ ಎಂದರ್ಥ.

ಅಧ್ರುವಫಲಗಳನ್ನು ಬಯಸುವವರು ಬಾಲರೇ ಹೊರತು ಧೀರರಲ್ಲ. ಆ ಅಧ್ರುವಫಲಗಳು ಯಾವುವು? ಎಂದರೆ, **ಜನ್ಮ ಮರಣ ಜರಾ ರೋಗಾದಿ ಅನೇಕಾನರ್ಥವ್ರಾತಮ್**, ಜನ್ಮಮರಣ ಜರಾ ರೋಗಾದಿ ಅನೇಕ ಅನರ್ಥರೂಪವಾದ ಫಲಗಳೆಲ್ಲವೂ ಅಧ್ರುವಫಲಗಳೇ. ದೇವಲೋಕಾದಿಗಳೂ ಅನಿತ್ಯಫಲಗಳೇ ಎಂಬುದನ್ನು ವಿವೇಕದಿಂದ ತಿಳಿದು, ಅದರಿಂದಲೂ ವಿರಕ್ತರಾದವರನ್ನೇ **ವೇದಾಂತದಲ್ಲಿ ಧೀರರು** ಎಂದು ಕರೆದಿದೆ.

**ಅನಿತ್ಯಫಲಗಳಿಂದ ವಿರಕ್ತರಾದವರೇ ಧೀರರು**

## 32. ಧೀರನ ನಾಲ್ಕು ನಿರ್ಣಯಗಳು

**ವೇದಾಂತದಲ್ಲಿ ಧೀರನಿಗೆ** ವಿವೇಕವೇ ಮುಖ್ಯವಾದ ಲಕ್ಷಣವು. ಆದ್ದರಿಂದಲೇ ಶಂಕರರು **ಧೀರಾಃ** ಎಂದು ವೇದಾಂತಗಳಲ್ಲಿ ಬಂದಾಗಲೆಲ್ಲ **ವಿವೇಕಿನಃ** ಎಂದೇ ಬರೆಯುತ್ತಾರೆ. **ಧೀರನೆಂದರೆ ವಿವೇಕಿ** ಎಂದರ್ಥ. ಬುದ್ಧಿಯಿಂದ, ವಿವೇಕದಿಂದ ಅನಿತ್ಯ ಪದಾರ್ಥಗಳನ್ನು ಕೈಬಿಟ್ಟು, ನಿತ್ಯವಾದ ಮೋಕ್ಷಫಲವನ್ನೇ ಬಯಸುವ ಬುದ್ಧಿವಂತನೇ **ವೇದಾಂತದಲ್ಲಿ ಧೀರ** ಎನಿಸುತ್ತಾನೆ.

ಸರಿ, ಆಗಬಹುದು. ಇಂಥ ಧೀರನ ಲಕ್ಷಣಗಳೇನು? ಇವನ ನಿರ್ಣಯಗಳೇನು? ಎಂಬುದನ್ನು ಈ ಕೆಳಗಿನ ಶ್ಲೋಕದಲ್ಲಿ ಹೇಳಿದೆ:

**ಅನಿತ್ಯಾನಿ ಶರೀರಾಣಿ ವಿಭವಾ ನೈವ ಶಾಶ್ವತಾಃ।**
**ನಿತ್ಯಂ ಸಂನಿಹಿತೋ ಮೃತ್ಯುಃ ತಸ್ಮಾತ್ ಜಾಗ್ರತ ಜಾಗ್ರತ॥**

**ಅನಿತ್ಯಾನಿ ಶರೀರಾಣಿ:** ಮನುಷ್ಯರಾದವರೆಲ್ಲರ ಶರೀರಗಳೂ ಅನಿತ್ಯವಾದವುಗಳೇ. ಮನುಷ್ಯರಾಗಿ ಹುಟ್ಟಿದ ಮೇಲೆ ಆ ದೇಹಗಳು ಶಾಶ್ವತವೇನಲ್ಲ. ಮತ್ತೇನೆಂದರೆ ಅನಿತ್ಯವಾಗಿರುತ್ತವೆ. ಏಕೆಂದರೆ **ಜಾತಸ್ಯ ಮರಣಂ ಧ್ರುವಂ,** ಹುಟ್ಟಿದ ಶರೀರವು ಸಾಯಲೇ ಬೇಕಲ್ಲವೇ? ಶರೀರವು ತಾನಲ್ಲವೆಂದು ತಿಳಿದವನೇ ಧೀರನು.

**ವಿಭವಾ ನೈವ ಶಾಶ್ವತಾಃ:** ನಮ್ಮ ಸಂಪತ್ತುಗಳಾವುವೂ ಶಾಶ್ವತವಲ್ಲ. ಮನುಷ್ಯನು ಕಷ್ಟಪಟ್ಟು ಹಣ, ಅಧಿಕಾರ, ಕೀರ್ತಿ, ದೇಹಸೌಂದರ್ಯ, ಮನೆ, ಆಸ್ತಿ, ನಿವೇಶನ, ಪಶು, ಪತ್ನೀ, ಪುತ್ರಾದಿ ಸಂಪತ್ತುಗಳನ್ನು ಸಂಪಾದಿಸಿ ಇಟ್ಟುಕೊಂಡಿರುತ್ತಾನೆ. ಇವುಗಳನ್ನೆಲ್ಲ **ಶಾಶ್ವತ ಸಂಪತ್ತುಗಳು** ಎಂದು ತಿಳಿದಿರುತ್ತಾನೆ. ಆದರೆ ನೆನಪಿರಲಿ, ಈ ಸಂಪತ್ತುಗಳಾವುದೂ ಶಾಶ್ವತವಲ್ಲ. ಆದ್ದರಿಂದ ಈ ಸಂಪತ್ತುಗಳು ಕ್ಷಣಿಕಮಾತ್ರವೇ ಹೊರತು ಶಾಶ್ವತವಲ್ಲ, ನಿತ್ಯವಲ್ಲ ಎಂದು ತಿಳಿದವನೇ **ವೇದಾಂತದಲ್ಲಿ ಧೀರನು.**

**ನಿತ್ಯಂ ಸಂನಿಹಿತೋ ಮೃತ್ಯುಃ:** ಮರಣವು ನಾಳೆ, ಮುಂದಿನ ತಿಂಗಳು, ಮುಂದಿನ ವರ್ಷ ಬರುತ್ತದೆ ಎಂದು ತಿಳಿಯುವವನು ಮೂರ್ಖ. ಮತ್ತೇನೆಂದರೆ ಮರಣವು ಎಲ್ಲಿ ಬೇಕಾದರೂ, ಹೇಗೆ ಬೇಕಾದರೂ, ಯಾವಾಗ ಬೇಕಾದರೂ ನನಗೆ ಬರಬಹುದು; ಅಲ್ಲಾ , ಈಗಲೇ ಬೇಕಾದರೂ ನನಗೆ ಮರಣವು ಬಂದು ಬಿಡಬಹುದು ಎಂದು ತಿಳಿದವನೇ **ವೇದಾಂತದಲ್ಲಿ ಧೀರ**ನಾಗುತ್ತಾನೆ.

**ತಸ್ಮಾತ್ ಜಾಗ್ರತ ಜಾಗ್ರತ:** ಆದ್ದರಿಂದ ನಾನು ಶಾಶ್ವತವಾದ ಮೋಕ್ಷವನ್ನೇ ಹೊಂದಬೇಕು, ವೇದಾಂತಗಳನ್ನು ಅಧ್ಯಯನಮಾಡುತ್ತಾ ಈಗಲೇ ಇಲ್ಲಿಯೇ ಆತ್ಮಜ್ಞಾನಿಯಾಗಲೇಬೇಕೆಂದು ಪ್ರಯತ್ನಿಸುವವನೇ **ವೇದಾಂತದಲ್ಲಿ ಧೀರನು.**

**ಸಕಲಸಂಪತ್ತುಗಳೂ ಅನಿತ್ಯವೆಂದು ತಿಳಿದವನೇ ಧೀರ**

# 33. ಧೀರನೂ–ದೀನನೂ

ವೇದಾಂತದಲ್ಲಿ ಸಕಲ ಮಾನವರನ್ನೂ **ಧೀರರು** ಹಾಗೂ **ದೀನರು** ಎಂದು ಎರಡಾಗಿ ವಿಂಗಡಿಸಿರುತ್ತಾರೆ. ವ್ಯವಹಾರಕ್ಷೇತ್ರದಲ್ಲಿ ಇವರು ಧೀರರೇ ಆಗಿದ್ದರೂ, ವೇದಾಂತದ ದೃಷ್ಟಿಯಲ್ಲಿ ಇವರು ದೀನರೇ. ಏಕೆಂದರೆ ಇವರಿಗೆ ಶಾಶ್ವತವಾದ ಆನಂದವು ದೊರಕಿರುವುದಿಲ್ಲ. ಇವರು ಬಾಹ್ಯವಿಷಯಗಳಲ್ಲಿಯೇ ನಿರತರಾಗಿ ಅಷ್ಟರಿಂದಲೇ ಸಂತೃಪ್ತರಾಗಿರುತ್ತಾರೆ. ಇವರು ಅಲ್ಪಫಲದಿಂದಲೇ ತೃಪ್ತರಾಗಿ, ಆ ಅಲ್ಪಫಲಗಳನ್ನೇ ಹೊಂದುವುದಕ್ಕಾಗಿ ಮತ್ತೆ ಮತ್ತೆ ಪ್ರಯತ್ನವನ್ನು ಮಾಡುತ್ತಿರುವ ಬಾಲಕರೇ ಎಂದು ಈ ಕೆಳಗಿನ ಮಂತ್ರವು ಹೇಳುತ್ತಿದೆ:

**ಪರಾಚಃ ಕಾಮಾನನುಯಂತಿ ಬಾಲಾಃ**
**ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ ।**
**ಅಥ ಧೀರಾ ಅಮೃತತ್ವಂ ವಿದಿತ್ವಾ**
**ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥** ಕಾಠಕ ೨-೪-೨

*ಬಾಲರು ಹೊರಗಿರುವ ಕಾಮಗಳನ್ನೇ ಅನುಸರಿಸಿ ಹೋಗುತ್ತಿರುತ್ತಾರೆ. ಅವರು ಅಲ್ಲಿ ಯಮನು ಬೀಸಿರುವ ದೊಡ್ಡ ಬಲೆಯಲ್ಲಿ ಸಿಕ್ಕಿಕೊಂಡುಬಿಡುತ್ತಾರೆ. ಆದರೆ, ಧೀರರು ಮಾತ್ರ ನಿತ್ಯವಾದ ಅಮೃತತ್ವವನ್ನೇ ಕಂಡುಕೊಂಡವರಾಗಿ, ಅನಿತ್ಯವಾದ ಈ ಕಾಮ ಭೋಗಗಳಲ್ಲಿ ಸಿಕ್ಕಿಕೊಳ್ಳುವುದಿಲ್ಲ, ಏಕೆಂದರೆ ಇವರು ಬುದ್ಧಿವಂತರಾದ ಧೀರರು!*

ಈ ಮಂತ್ರದಲ್ಲಿ **ಧೀರರ** ಲಕ್ಷಣಗಳನ್ನೂ **ಬಾಲರ** ಹಣೆಬರಹವನ್ನೂ ತಿಳಿಸಿದೆ. ಬಾಲರು, ಮಂದರು, ಅವಿವೇಕಿಗಳು ಎಂದರೆ ಅಷ್ಟೊಂದು ಆಳವಾಗಿ ವಿಚಾರವನ್ನು ಮಾಡದ ದಡ್ಡರು ಎಂದರ್ಥ. ಇವರಿಗೆ ಹೆಚ್ಚಿನ ವಿವೇಕವಾಗಲೀ, ವಿಚಾರವಾಗಲೀ ಇರುವುದಿಲ್ಲ. ಏಕೆಂದರೆ ಇವರಿಗೆ ಹೆಸರೇ ಬಾಲಕರು ಎಂದು. ೪, ೬ ವರ್ಷದ ಬಾಲಕರಿಗೆ ಚಿನ್ನ ವಜ್ರದ ಮಹಿಮೆಯು ಅರ್ಥವಾಗುವುದಿಲ್ಲ. ಇವರಿಗೆ ಚಾಕೋಲೇಟ್, ಬಿಸ್ಕತ್ತು, ಪೆನ್ನು, ರಬ್ಬರ್, ಐಸ್ ಕ್ರೀಮ್, ಕೇಕ್ ಇಷ್ಟಿದ್ದರೆ ಸಾಕೇ ಸಾಕು. ಏಕೆಂದರೆ ಇವರು ಬಾಲಕರಲ್ಲವೇ? ಇಂಥ ಬಾಲಕರಿಗೆ ನಿವೇಶನ, ಅರಮನೆ, Refrigerator, Washing Machine, ಮಂತ್ರಿಪದವಿ —ಇದಾವುದೂ ಬೇಡ. ಏಕೆಂದರೆ, ಇವರು ಬಾಲಕರು.

ಹೀಗೆಯೇ ವೇದಾಂತದಲ್ಲಿಯೂ ಅನಾತ್ಮಜ್ಞರನ್ನು ಬಾಲರು, ದೀನರು ಎಂದೆಲ್ಲಾ ಕರೆದಿದ್ದಾರೆ. ಇವರು ಯಾರು? ಎಂದರೆ, ಬಾಹ್ಯ ಅನಾತ್ಮಭೋಗ ಗಳಲ್ಲಿ ನಿರತರಾದವರು. ಇವರು ಸಮಾಜದಲ್ಲಿ ಅತ್ಯಂತ ಪ್ರತಿಷ್ಠಿತ ವ್ಯಕ್ತಿ ಗಳಾಗಿದ್ದರೂ, ವೇದಾಂತದ ಪ್ರಕಾರ ಇವರು ಬಾಲಕರೇ, ಅವಿವೇಕಿಗಳೇ.

**ಪ್ರತ್ಯಗಾತ್ಮನನ್ನೇ ತಿಳಿದು ಮಾನವರು ಧೀರರಾಗಬೇಕು**

## 34. ಪ್ರಮೂಢರಿಗೆ ಹೀನಲೋಕಪ್ರಾಪ್ತಿ

ಶಾಶ್ವತವಾದ ಮೋಕ್ಷವನ್ನೇ ಬಯಸುತ್ತಾ, ಅದನ್ನು ಹೊಂದುವುದಕ್ಕಾಗಿ ಕರ್ಮೋಪಾಸನೆಗಳಿಂದಲೂ, ಬ್ರಹ್ಮಲೋಕದಿಂದಲೂ ವಿರಕ್ತನಾದವನೇ **ಧೀರನು** ಎನಿಸುತ್ತಾನೆ. ಹೀಗಲ್ಲದೇ, ಬರೀ ಕರ್ಮಗಳನ್ನೇ ಮಾಡುತ್ತಾ, ಅದರಲ್ಲಿಯೇ ಮುಳುಗಿರುವವನನ್ನು ವೇದಾಂತದಲ್ಲಿ **ಪ್ರಮೂಢ** ಎಂದು ಕರೆದಿದೆ. ಇವನಿಗೆ ದೊರಕುವ ಫಲಗಳು ಎಂದರೆ ಸ್ವರ್ಗಲೋಕ; ಅನಂತರ ಆ ಸ್ವರ್ಗಲೋಕದಿಂದ ಜಾರಿಬಿದ್ದು ಹೀನಲೋಕವನ್ನು ಇವನು ಹೊಂದುತ್ತಾನೆ ಎಂದು ಈ ಕೆಳಗಿನ ಮುಂಡಕೋಪನಿಷತ್ತಿನ (೧-೨-೧೦) ಮಂತ್ರವು ಸಾರುತ್ತಿದೆ:

**ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ**
**ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ।**
**ನಾಕಸ್ಯ ಪೃಷ್ಠೇ ತೇ ಸುಕೃತೇಽನುಭೂತ್ವಾ**
**ಇಮಂ ಲೋಕಂ ಹೀನತರಂ ವಾ ವಿಶಂತಿ॥**

*ಇಷ್ಟಾಪೂರ್ತಕರ್ಮಗಳನ್ನೇ ಶ್ರೇಷ್ಠಸಾಧನಗಳೆಂದು ತಿಳಿದು, ಯಾರು ಅದರಲ್ಲಿಯೇ ಮುಳುಗಿರುತ್ತಾರೆಯೋ; ಆತ್ಮಜ್ಞಾನವೆಂಬ ಸಾಧನವನ್ನು ತಿಳಿಯುವುದೇ ಇಲ್ಲವೋ ಅಂಥವರು* ***ವೇದಾಂತದಲ್ಲಿ ಪ್ರಮೂಢರು*** *ಎನಿಸುತ್ತಾರೆ. ಅಂಥವರು ಸ್ವರ್ಗಲೋಕ ದಲ್ಲಿ ಸುಖಗಳನ್ನು ಅನುಭವಿಸಿ, ಅನಂತರ ಕರ್ಮಫಲಗಳು ಸವೆಯಲಾಗಿ ಈ ಲೋಕ ವನ್ನೋ, ಅಥವಾ ಇನ್ನೂ ಹೀನವಾದ ಲೋಕಗಳನ್ನೋ ಹೊಂದುತ್ತಾರೆ.*

ಅಗ್ನಿಹೋತ್ರಾದಿಕರ್ಮಗಳಿಗೆ **ಇಷ್ಟ**ವೆಂದೂ, ವಾಪೀಕೂಪ ಆರಾಮಾದಿ ಗಳಿಗೆ **ಪೂರ್ತ**ವೆಂದೂ ಹೆಸರುಗಳು. ಇಷ್ಟಾಪೂರ್ತಕರ್ಮಗಳಷ್ಟನ್ನೇ ಅನುಷ್ಠಾನ ಮಾಡುತ್ತಾ, ಆ ಕರ್ಮಗಳ ಫಲಗಳನ್ನೇ ಪುರುಷಾರ್ಥವೆಂದು ತಿಳಿದವರು **ಧೀರರಲ್ಲ**, ಮತ್ತೇನೆಂದರೆ ಇವರು **ಮೂಢರು, ಪ್ರಮೂಢರು** ಎನಿಸುತ್ತಾರೆ. ಇವರಿಗೆ ಇಷ್ಟಾಪೂರ್ತಗಳಿಗಿಂತ ಭಿನ್ನವಾದ ಆತ್ಮಜ್ಞಾನದ ಗಂಧವೂ ಇರುವುದಿಲ್ಲ. **ಅನ್ಯತ್ ಆತ್ಮಜ್ಞಾನಾಖ್ಯಂ ಶ್ರೇಯಃಸಾಧನಂ ನ ವೇದಯಂತೇ, ನ ಜಾನಂತಿ, ಪ್ರಮೂಢಾಃ ಪುತ್ರಪಶುಬಂಧ್ವಾದಿಷು ಪ್ರಮತ್ತತಯಾ ಮೂಢಾಃ।**

ಈ ಪ್ರಮೂಢರು ಸ್ವರ್ಗಲೋಕದ ಸುಖವನ್ನು ಅನುಭವಿಸಿ, ಮತ್ತೆ ಅಲ್ಲಿಂದ ಮನುಷ್ಯಲೋಕಕ್ಕೆ ಜಾರಿಬೀಳುತ್ತಾರೆ; **ಅಥವಾ ಹೀನತರಂ ವಾ ತಿರ್ಯಙ್ ನರಕಾದಿಲಕ್ಷಣಂ ವಾ ಯಥಾಕರ್ಮಶೇಷಂ ವಿಶಂತಿ**, ಅಥವಾ ಅವರ ಕರ್ಮ ಶೇಷಕ್ಕೆ ತಕ್ಕಂತೆ ತಿರ್ಯಗ್ಜಂತುಗಳಾಗಿ, ನರಕವೇ ಮುಂತಾದ ಹೀನತರವಾದ ಫಲಗಳನ್ನೇ ಹೊಂದುತ್ತಾರೆ ಎಂದು ಶ್ರೀಶಂಕರರ ಭಾಷ್ಯ.

**ಬರೀ ಕರ್ಮಗಳಲ್ಲಿಯೇ ಮುಳುಗಿರುವವರು ಧೀರರಲ್ಲ**

## 35. ಧೀರ ಮುಮುಕ್ಷುವಿಗೆ ಗೀತಾಚಾರ್ಯನ ಸಂದೇಶ

ವೇದಾಂತದಲ್ಲಿ **ಧೀರ**ನೆಂದರೆ ಮುಮುಕ್ಷುಸಾಧಕನೇ. ಇವನು ವಿವೇಕದ ಬಲದಿಂದ ಬ್ರಹ್ಮಲೋಕಾಂತಫಲಗಳನ್ನೂ ತಿರಸ್ಕರಿಸಿ ನಿತ್ಯವಾದ ಮೋಕ್ಷವನ್ನೇ ಹೊಂದುವುದಕ್ಕೆ ಪ್ರಯತ್ನಿಸುತ್ತಿದ್ದಾನೆ. ಆದ್ದರಿಂದಲೇ ಇವನಿಗೆ **'ಧೀರ'** ಎಂದು ಹೆಸರು. ಇಂಥ ಧೀರನಿಗೆ, ಧೀರನಾದ ಗೀತಾಚಾರ್ಯನು ಸಂತೋಷಕರವಾದ ಹಾಗೂ ಪ್ರೋತ್ಸಾಹಕವಾದ ಮತ್ತು ರಂಜಕವಾದ ಒಂದು ಸಂದೇಶವನ್ನು ಈ ಕೆಳಗಿನ ಶ್ಲೋಕದಲ್ಲಿ (೮-೧೬) ಹೇಳಿದ್ದಾನೆ:

**ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ॥**

*ಅರ್ಜುನನೇ, ಬ್ರಹ್ಮಲೋಕದ ವರೆಗಿರುವ ಎಲ್ಲಾ ಲೋಕಗಳೂ ಪುನರಾವರ್ತನವುಳ್ಳದ್ದಾಗಿರುತ್ತವೆ. ಆದರೆ ನನ್ನನ್ನೇ ಸೇರಿದರೆ, ಅಂಥವರಿಗೆ ಅಂದರೆ ಆತ್ಮಜ್ಞಾನದಿಂದ ಮುಕ್ತರಾದವರಿಗೆ, ಪುನರ್ಜನ್ಮವು ಇರುವುದಿಲ್ಲ.*

ಧೀರರಾದ ಅಧ್ಯಾತ್ಮಸಾಧಕರಿಗೆ ಎಂಥಾ ಭವ್ಯವಾದ ಸಂದೇಶವಿದು! ಇದು ಯಾವನೋ ಒಬ್ಬ ಪಂಡಿತನ ಮಾತಲ್ಲ , ಯಾವನೋ ಒಬ್ಬ ಕವಿಯ ಮಾತೂ ಅಲ್ಲ; ಮತ್ತೇನೆಂದರೆ, ಸಾಕ್ಷಾತ್ ಭಗವಂತನಾದ ಗೀತಾಚಾರ್ಯನಾದ ಶ್ರೀಕೃಷ್ಣನ ಸಂದೇಶವಿದು, ನೆನಪಿರಲಿ; ಇದರ ರಹಸ್ಯಾರ್ಥವನ್ನು ಈಗ ನೋಡೋಣ:

ಕರ್ಮೋಪಾಸನೆಗಳಿಂದ ಉತ್ತಮೋತ್ತಮವಾದ ಪಿತೃಲೋಕ, ಸ್ವರ್ಗ ಲೋಕ, ಬ್ರಹ್ಮಲೋಕಗಳೇ ದೊರಕಬಹುದು. ಆದರೆ ಈ ಲೋಕಗಳಾವುವೂ ಸ್ಥಿರವಲ್ಲ, ಶಾಶ್ವತವಲ್ಲ, ನಿತ್ಯವೂ ಅಲ್ಲ; ಮತ್ತೇನೆಂದರೆ ಇವೆಲ್ಲವೂ ಅನಿತ್ಯ ಲೋಕಗಳೇ. ಇಲ್ಲಿಂದ ಬ್ರಹ್ಮಲೋಕಕ್ಕೆ ಹೋದರೂ ಅಲ್ಲಿಂದ ವಾಪಸ್ಸು ಬರಲೇ ಬೇಕು. ಎಂದರೆ, ಇದೇ ಸಂಸಾರಚಕ್ರ! ಆದರೆ,

**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ।**

*ನನ್ನನ್ನೇ ಹೊಂದಿದರೆ ಅಂಥವನಿಗೆ ಪುನರ್ಜನ್ಮವಿಲ್ಲ.*

ಎಂಥಾ ಸಂತೋಷದ ಸುದ್ದಿಯಿದು! ಭಗವಂತನನ್ನೇ ಹೊಂದುವುದು ಎಂದರೆ **ತದ್ವಿಷ್ಣೋಃ ಪರಮಂ ಪದಂ** ಎಂಬುವ ವೈಷ್ಣವಪದ; ಇದಕ್ಕೇ ಮೋಕ್ಷ, ಅಶರೀರತ್ವ, ಅಮೃತತ್ವ ಎಂದೆಲ್ಲ ಹೆಸರುಗಳು. ಮುಕ್ತನಾದವನು ಜನ್ಮಾಂತರವನ್ನಾಗಲೀ ದೇಹಾಂತರವನ್ನಾಗಲೀ ಲೋಕಾಂತರವನ್ನಾಗಲೀ ಹೊಂದುವುದಿಲ್ಲ. **ನ ತಸ್ಯ ಪ್ರಾಣಾ ಉತ್ಕ್ರಾಮಂತಿ** ಎಂದು ಶ್ರುತಿಯು ಇದನ್ನೇ ಹೇಳುತ್ತಿದೆ.

**ಆತ್ಮಜ್ಞಾನಿಯು ಜೀವನ್ಮುಕ್ತನಾಗಿ ಜನ್ಮಾಂತರವನ್ನು ಹೊಂದುವುದಿಲ್ಲ**

# 36. ಮೂಢರಾದ ಸ್ವಯಂಧೀರರಿವರು!

ವಿವೇಕದ ಬಲದಿಂದ ಆತ್ಮನನ್ನೇ ತಿಳಿದು, ಅವಿದ್ಯೆಯನ್ನು ದೂರಮಾಡಿಕೊಂಡು, ಶಾಶ್ವತವಾದ ಮೋಕ್ಷವನ್ನೇ ಹೊಂದುವವರನ್ನು **ವೇದಾಂತದಲ್ಲಿ ಧೀರರು** ಎಂದು ಕರೆದಿದೆ. ಆದರೆ ವಿವೇಕವಾಗಲೀ ವೈರಾಗ್ಯವಾಗಲೀ ಇಲ್ಲದೇ, ಅವಿದ್ಯೆಯಲ್ಲಿಯೇ ಇದ್ದುಕೊಂಡು, ತಮ್ಮನ್ನು ಧೀರರೆಂದೂ ಪಂಡಿತರೆಂದೂ ತಾವೇ ಕರೆದುಕೊಳ್ಳುತ್ತಿದ್ದರೆ, ಅಂಥವರನ್ನು ವೇದಾಂತದಲ್ಲಿ **ಮೂಢರು** ಎಂದು ಕರೆದಿರುತ್ತದೆ. ಕಾಠಕೋಪನಿಷತ್ತಿನ ಆ ಮಂತ್ರವನ್ನು ನೋಡೋಣ:

**ಅವಿದ್ಯಾಯಾಮಂತರೇ ವರ್ತಮಾನಾಃ**
**ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ।**
**ದಂದ್ರಮ್ಯಮಾಣಾಃ ಪರಿಯಂತಿ ಮೂಢಾಃ**
**ಅಂಧೇನೈವ ನೀಯಮಾನಾ ಯಥಾಂಧಾಃ॥**

ಕಾಠಕೋಪನಿಷತ್ ೨-೫, ಮುಂಡಕೋಪನಿಷತ್ ೧-೨-೮

*ಅವಿದ್ಯೆಯ ಮಧ್ಯೇ ಇದ್ದುಕೊಂಡಿದ್ದರೂ ಇವರು ತಮ್ಮನ್ನು ಧೀರರೆಂದೂ ಪಂಡಿತರೆಂದೂ ತಿಳಿದುಕೊಂಡು, ಸಂಸಾರಚಕ್ರದಲ್ಲಿಯೇ ಸಿಕ್ಕಿಕೊಂಡು ಈ ಮೂಢರು ತೊಳಲಾಡುತ್ತಿರುತ್ತಾರೆ. ಕುರುಡನಿಂದ ನೀಯಮಾನರಾದ ಕುರುಡರಂತೆ ಇವರು ಇರುತ್ತಾರೆ.*

**ಯೇ ತು ಸಂಸಾರಭಾಜನಾಃ ಅವಿದ್ಯಾಯಾಮಂತರೇ ಮಧ್ಯೇ ಘನೀಭೂತೇ ಇವ ತಮಸಿ, ವರ್ತಮಾನಾಃ ಪುತ್ರಪಶ್ವಾದಿತೃಷ್ಣಾಪಾಶಶತೈಃ ವೇಷ್ಟ್ಯಮಾನಾಃ; ಸ್ವಯಂಧೀರಾಃ ಪ್ರಜ್ಞಾವಂತಃ, ಪಂಡಿತಾಃ ಶಾಸ್ತ್ರಕುಶಲಾಶ್ಚ ಇತಿ ಮನ್ಯಮಾನಾಃ,** ಸಂಸಾರವನ್ನೇ ಹೊಂದುವುದಕ್ಕೆ ತಕ್ಕವರಾಗಿ ಇವರು ಅವಿದ್ಯೆಯ ಮಧ್ಯದಲ್ಲಿಯೇ, ದಪ್ಪನಾದ ಅವಿದ್ಯಾತಮಸ್ಸಿನಲ್ಲಿಯೇ ಮುಳುಗಿರುತ್ತಾರೆ. ಪುತ್ರ ಪಶು ಮುಂತಾದ ತೃಷ್ಣಾಪಾಶಶತಗಳಿಂದ ಸುತ್ತಲ್ಪಟ್ಟವರಾಗಿದ್ದರೂ ತಮ್ಮನ್ನು ಧೀರರೆಂದೂ ಪಂಡಿತರೆಂದೂ ಶಾಸ್ತ್ರಪ್ರವೀಣರೆಂದೂ ತಿಳಿದಿರುತ್ತಾರೆ.

ಇವರು ನಿಜವಾಗಿ **ಮೂಢರೇ** ಆಗಿರುತ್ತಾರೆ. ಏಕೆಂದರೆ ಇವರಿಗೆ ತಮ್ಮ ಪ್ರತ್ಯಗಾತ್ಮನ ಸ್ವರೂಪದ ಅರಿವೇ ಇಲ್ಲ. ಇಂತವರು ಸ್ವತಃ ತಾವು ಕುರುಡರೇ ಆಗಿದ್ದರೂ, ಅದನ್ನು ತಿಳಿಯದೇ ಬೇರೆ ಕುರುಡರಿಗೂ ಇವರು ಮಾರ್ಗದರ್ಶಕರಾಗಿರುತ್ತಾರೆ. ತಾವು ಮಹಾಪಂಡಿತರೆಂದು ತಿಳಿದು ಇವರು ಇತರರಿಗೆ ಗುರುಗಳೂ ಆಗಿರುತ್ತಾರೆ. ಇಂಥವರು ಮೂರ್ಖರು. ಇಂಥ ಮೂರ್ಖರಿಂದ ಮುಮುಕ್ಷುಸಾಧಕರು ದೂರವಿರಬೇಕು. ವಿವೇಕಿಗಳಾದ ಧೀರರನ್ನೇ ಮುಮುಕ್ಷುಸಾಧಕರುಗಳು ಅನುಸರಿಸಬೇಕು ಎಂದು ತಾತ್ಪರ್ಯ!

**ಆತ್ಮಜ್ಞಾನರಹಿತರು ಅಂಧರೇ ಆಗಿರುತ್ತಾರೆ**

# 37. ಉಭೌ ಯೇನಾನುಪಶ್ಯತಿ

ಬಡಕುಟುಂಬದಲ್ಲಿ ಹುಟ್ಟಿ, ಕೋಟಿಗಟ್ಟಲೇ ಹಣವನ್ನು ಸಂಪಾದನೆ ಮಾಡುವವನನ್ನು ನಾವಿಲ್ಲಿ **ಧೀರ** ಎಂದು ಕರೆಯುವುದಿಲ್ಲ; ಅನಕ್ಷರಸ್ಥರ ವಂಶದಲ್ಲಿ ಹುಟ್ಟಿ ದೊಡ್ಡ ವಿದ್ವಾಂಸನಾದರೆ ಅವನನ್ನೂ ನಾವಿಲ್ಲಿ **ಧೀರ** ಎಂದು ಕರೆಯುವುದಿಲ್ಲ. ಇನ್ನು, ಒಬ್ಬಂಟಿಗನಾಗಿ, ಒಬ್ಬನೇ ಇಪ್ಪತ್ತೈದು ಜನಗಳ ದೊಡ್ಡ ಕುಟುಂಬವನ್ನು ಸಾಕುತ್ತಿದ್ದರೆ ಅವನೂ ವೇದಾಂತದ **ಧೀರ**ನೆನಿಸುವುದಿಲ್ಲ. ಇನ್ನು ದೇಶ ವಿದೇಶಗಳನ್ನು ಸುತ್ತಾಡುತ್ತಾ ಲೋಕಾನುಭವವನ್ನು ಪಡೆದಿದ್ದರೆ ಅವನೂ ಇಲ್ಲಿ **ಧೀರ**ನಲ್ಲ. ಇವರೆಲ್ಲರೂ **ಲೋಕದಲ್ಲಿ ಧೀರರೇ** ಹೊರತು **ವೇದಾಂತದಲ್ಲಲ್ಲ**. ಹಾಗಾದರೆ ವೇದಾಂತದಲ್ಲಿ ಯಾರು ಧೀರರು? ಎಂದರೆ ಬಾಹ್ಯ ಅನಾತ್ಮವಿಷಯಗಳನ್ನು ಬಿಟ್ಟು, ತಮ್ಮೊಳಗಿರುವ ಸಾಕ್ಷಿಸ್ವರೂಪನಾದ ಪ್ರತ್ಯಗಾತ್ಮನನ್ನು ಕಾಣುವವರೇ **ವೇದಾಂತದಲ್ಲಿ ಧೀರ**ರೆನಿಸುತ್ತಾರೆ. ಹೀಗೆಂದು **ಕಾಠಕೋಪನಿಷತ್ತಿ**ನಲ್ಲಿ ಮೃತ್ಯುವು ಉಪದೇಶಿಸಿರುತ್ತಾನೆ:

**ಸ್ವಪ್ನಾಂತಂ ಜಾಗರಿತಾಂತಂ ಚ ಉಭೌ ಯೇನಾನುಪಶ್ಯತಿ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ॥**

ಕಾಠಕೋಪನಿಷತ್ ೪-೪

*ಸ್ವಪ್ನಮಧ್ಯವನ್ನೂ ಜಾಗ್ರತ್‌ವಿಷಯಗಳನ್ನೂ ಯಾವ ಆತ್ಮನ ಸಹಾಯದಿಂದ ಜನಗಳು ನೋಡುತ್ತಾರೆಯೋ, ಅಂಥ ಪ್ರತ್ಯಗಾತ್ಮನೆಂಬ ಸಾಕ್ಷಿಯನ್ನು ತಾನೆಂದು ತಿಳಿದವನೇ* ***ಧೀರನು****. ಅವನಿಗೆ ಶೋಕಗಳಿಲ್ಲ.*

ನಮ್ಮೆಲ್ಲರಿಗೂ ಎಚ್ಚರ, ಕನಸು ಮತ್ತು ನಿದ್ರೆಗಳೆಂಬ ಮೂರು ಅವಸ್ಥೆಗಳಿರುತ್ತವೆಯಲ್ಲವೇ? ಇದನ್ನೇ ವೇದಾಂತದಲ್ಲಿ **ಜಾಗ್ರದವಸ್ಥಾ**, **ಸ್ವಪ್ನಾವಸ್ಥಾ**, **ಸುಷುಪ್ತ್ಯವಸ್ಥಾ** ಎಂದು ಕರೆಯುತ್ತಾರೆ. ಈ ಮೂರು ಅವಸ್ಥೆಗಳೂ ಬದಲಾವಣೆಯನ್ನು ಹೊಂದುತ್ತಾ ಇರುತ್ತವೆ. ಏಕೆಂದರೆ ಒಂದವಸ್ಥೆಯು ತೋರುವಾಗ ಮತ್ತೊಂದವಸ್ಥೆಯು ತೋರುವುದಿಲ್ಲ. ಆದರೆ ಆತ್ಮನು ಬದಲಾವಣೆಯಾಗುತ್ತಿರುವ ಈ **ಅವಸ್ಥಾತ್ರಯ**ಗಳನ್ನು ನಿರ್ವಿಕಾರನಾಗಿ, ಅಸಂಗನಾಗಿ, ಕೂಟಸ್ಥನಿತ್ಯನಾಗಿ ಬೆಳಗುತ್ತಾ ಇರುತ್ತಾನಲ್ಲವೇ? ಇವನಿಗೇ ವೇದಾಂತದಲ್ಲಿ **ಸಾಕ್ಷೀ** ಎಂದು ಹೆಸರು. ಇವನೇ ನಮ್ಮೊಳಗಿರುವ ಪ್ರತ್ಯಗಾತ್ಮನೂ ಕೂಡ. ಇವನು ಮಹಾಂತನೂ ವಿಭುವೂ ಪರಿಪೂರ್ಣನೂ ಆಗಿರುತ್ತಾನೆ. ಇವನೇ ತಾನೆಂದು ವಿವೇಕದಿಂದ ತಿಳಿದವನಿಗೆ ಧೀರ ಎಂದು ಹೆಸರು. ಈ ಧೀರನಿಗೆ ದುಃಖವು ಇಲ್ಲವೇ ಇಲ್ಲ. ಪ್ರತ್ಯಗಾತ್ಮನನ್ನು ತಿಳಿದವನೇ **ವೇದಾಂತದಲ್ಲಿ ಧೀರನು**.

**ಅವಸ್ಥಾತ್ರಯಸಾಕ್ಷಿಯೇ ತಾನೆಂದು ತಿಳಿದವನೇ ಧೀರ**

# 38. ಮೋಕ್ಷಾರ್ಥಿಯೇ ಪುರುಷಶ್ರೇಷ್ಠನು

ಧರ್ಮ, ಅರ್ಥ, ಕಾಮ, ಮೋಕ್ಷ—ಈ ನಾಲ್ಕಕ್ಕೆ **ಪುರುಷಾರ್ಥಗಳು** ಎಂದು ಹೆಸರಿದೆ. ಧರ್ಮ, ಅರ್ಥ, ಕಾಮಗಳಿಗೆ **ತ್ರಿವರ್ಗ** ಎಂದು ಹೆಸರು, ಮೋಕ್ಷಕ್ಕೆ **ಪರಮಪುರುಷಾರ್ಥ** ಎಂದು ಹೆಸರು. ಧೀರರಾದ ಸಾಧಕರು ಪರಮ ಪುರುಷಾರ್ಥವೆಂಬ ಮೋಕ್ಷವನ್ನೇ ಹೊಂದುವ ಪ್ರಯತ್ನವನ್ನು ಮಾಡಬೇಕು. **ಮೋಕ್ಷಫಲವಿರುವುದೇ ಮನುಷ್ಯರಿಗಾಗಿ, ಮನುಷ್ಯರಿಗೆ ಮಾತ್ರವೇ ಮೋಕ್ಷಫಲ** ಎಂಬುದು ನಮಗೆ ತಿಳಿದಿರಬೇಕು. ಇದನ್ನು ತಿಳಿಯದೇ, ಕೇವಲ ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗದಲ್ಲಿಯೇ ನಿಷ್ಠನಾದವನನ್ನು ವೇದಾಂತ ದಲ್ಲಿ **ಪಶು** ಎಂದೇ ಕರೆದಿದ್ದಾರೆ. ವೇದಾಂತಡಿಂಡಿಮದಲ್ಲಿ:

**ಪುರುಷಾರ್ಥತ್ರಯಾವಿಷ್ಟಾಃ ಪುರುಷಾಃ ಪಶವೋ ಧ್ರುವಮ್ ।**
**ಮೋಕ್ಷಾರ್ಥೀ ಪುರುಷಶ್ರೇಷ್ಠಃ ಇತಿ ವೇದಾಂತಡಿಂಡಿಮಃ ॥**

*ಪುರುಷಾರ್ಥತ್ರಯದಲ್ಲಿಯೇ ಮುಳುಗಿರುವ ಪುರುಷರು ನಿಜವಾಗಿಯೂ **ಪಶುಗಳೇ** ಆಗಿರುತ್ತಾರೆ; ಮೋಕ್ಷವನ್ನೇ ಬಯಸುವ ಮಾನವನೊಬ್ಬನೇ **ಪುರುಷಶ್ರೇಷ್ಠನಾದ ಧೀರನು** ಎಂದು ವೇದಾಂತಗಳು ಸಾರುತ್ತಿವೆ.*

ಇದು ಭಯಂಕರವೂ, ಸತ್ಯವೂ, ಕಠೋರವೂ ಆದ ಸಂದೇಶವಾಗಿದೆ. ಧರ್ಮದಿಂದ ಅರ್ಥ, ಅರ್ಥದಿಂದ ಕಾಮಗಳು, ಕಾಮಕ್ಕಾಗಿ ಅರ್ಥಗಳು, ಅರ್ಥದಿಂದ ಕಾಮಗಳು; ಹೀಗೆ ಬರೀ **ತ್ರಿವರ್ಗ**ಗಳಲ್ಲಿಯೇ ಸುತ್ತಾಡುತ್ತಾ ಮೋಕ್ಷವನ್ನೇ ವಿಚಾರಮಾಡದಿರುವ ಮನುಷ್ಯನು ಪಶುಸಮಾನನೇ ಆಗಿರುತ್ತಾನೆ. ಏಕೆಂದರೆ ಇವನಿಗೆ ಈ **ತ್ರಿವರ್ಗ**ಗಳಿಂದ ಅನಿತ್ಯಫಲಗಳೇ ಹೊರತು ಶಾಶ್ವತವಾದ ಮೋಕ್ಷವು ದೊರಕದು ಎಂಬ ವಿವೇಕವೇ ಇಲ್ಲವಲ್ಲ.

ಮಾನವನಿಗೆ ದೈವದತ್ತವಾದ ಅದ್ಭುತಸಂಪತ್ತು ಎಂದರೆ ವಿವೇಕ! ವಿವೇಕವು ಮಾನವರ ವಿಶೇಷ ಸಂಪತ್ತು, ನೆನಪಿರಲಿ. ವಿವೇಕದಿಂದ ವಿಚಾರ ಮಾಡುವವನೇ ಮಾನವ, ಅಥವಾ ಮನುಷ್ಯ! ಹೀಗಾಗಿ ವಿವೇಕವನ್ನು ಬಳಸಿ ಕೊಂಡು, ಅನಿತ್ಯಫಲಗಳನ್ನು ಬಿಟ್ಟು, ನಿತ್ಯವಾದ ಅಮೃತತತ್ತ್ವವನ್ನೇ ಬಯಸುವ ಮಾನವನೇ ವಿವೇಕಿ ಎನಿಸುತ್ತಾನೆ. ಆದರೆ ಮಾನವನಾಗಿ ಹುಟ್ಟಿ ಆತ್ಮಜ್ಞಾನದ ವಿಚಾರವನ್ನೇ ಮಾಡದೇ, ಮುಮುಕ್ಷುಸಾಧಕನೂ ಆಗದೇ ಪಶುಗಳಂತೆ ಧರ್ಮ ಅರ್ಥ ಕಾಮಗಳಲ್ಲಿಯೇ ನಿರತನಾಗಿದ್ದರೆ, ಅಂಥವನನ್ನು ವೇದಾಂತಗಳು **ಪಶು** ಎಂದೇ ಕರೆಯುತ್ತವೆ. **ನ ಸ ವೇದ, ಯಥಾ ಪಶುಃ ಏವಂ ಸ ದೇವಾನಾಂ.** ಅಜ್ಞಾನಿಯು ದೇವತೆಗಳಿಗೆ ಪಶುವೇ ಎಂದು ಶ್ರುತಿಯು ಹೇಳುತ್ತದೆ.

**ತ್ರಿವರ್ಗಗಳಲ್ಲಿಯೇ ಧೀರನು ನಿರತನಾಗಿರಬಾರದು**

# 39. ತನ್ನೊಳಗೇ ಬ್ರಹ್ಮವಿದೆ

ಪ್ರತಿಯೊಬ್ಬ ಮಾನವನೂ ಸುಖಶಾಂತಿಸಮೃದ್ಧಿಗಳನ್ನು ಬಯಸುತ್ತಾನೆ. ಅದಕ್ಕಾಗಿ ಈ ಪ್ರಚಂಡ ಮಾನವನು ತುಂಬಾ ಕಷ್ಟಪಡುತ್ತಾ ಅನೇಕ ಭೋಗವಸ್ತುಗಳನ್ನು ಸಂಗ್ರಹಿಸಿಕೊಳ್ಳುತ್ತಾ ಇಡೀ ತನ್ನ ಜೀವಮಾನವನ್ನೇ ವ್ಯರ್ಥವಾಗಿ ಕಳೆಯುತ್ತಿದ್ದಾನೆ. ಉದಾಹರಣೆಗೆ: ಪತ್ನೀ, ಪುತ್ರರು, ಪಶುಗಳು, ಕಾರ್, ಸ್ಕೂಟರ್, ಅರಮನೆ, ಮೊಬೈಲ್ ಫೋನ್, ಸುಪ್ಪತ್ತಿಗೆ, ವಾಚ್— ಇತ್ಯಾದಿ ಇತ್ಯಾದಿ ವಸ್ತುಗಳಿಂದ ತನಗೆ ಸುಖವು ಬರುತ್ತದೆ ಎಂದು ತಿಳಿದಿರುತ್ತಾನೆ. ಅದಕ್ಕಾಗಿ ಅಂಥ ವಸ್ತುಗಳನ್ನು ಕೂಡಿಹಾಕುತ್ತಾ ಇದ್ದಾನೆ ಕೂಡ.

ಆದರೆ ಅಧೀರರಿಗೆ ಅಂದರೆ ಅವಿವೇಕಿಗಳಿಗೆ ತಮ್ಮೊಳಗೇ ಇದ್ದರೂ ಆತ್ಮಾನಂದದ ಅರಿವು ಆಗಿರುವುದಿಲ್ಲ. ಏಕೆಂದರೆ ಆತ್ಮನು ಅಜ್ಞಾನದಿಂದ ಇವರಿಗೆ ಮುಚ್ಚಿಹೋಗಿರುತ್ತಾನೆ. ದೇಹಾದಿ ಅಧ್ಯಾಸದಿಂದ ಆತ್ಮಸ್ವರೂಪವು ಅವಿವೇಕಿಗಳಿಗೆ ಮುಚ್ಚಿಹೋಗಿರುತ್ತದೆ. ಈ ಕೆಳಗಿನ ಶ್ಲೋಕದಲ್ಲಿ ಈ ವಿಷಯವನ್ನು ತಿಳಿಸಿದೆ:

**ಜಲಂ ತದುದ್ಭವೈಶ್ಛನ್ನಂ ಹಿತ್ವಾ ತು ಜಲಕಾಮ್ಯಯಾ।**
**ಮೃಗತೃಷ್ಣಾಮುಪಾದಾಯ ಯಥಾನ್ಯತ್ರಾತ್ಮದೃಕ್ ಸ್ವತಃ॥**

**ಅನ್ವಯ:** ತದುದ್ಭವೈಃ ಛನ್ನಂ ಜಲಂ ಹಿತ್ವಾ ಜಲಕಾಮ್ಯಯಾ ಮೃಗತೃಷ್ಣಾಮ್ ಉಪಾದಾಯ ಯಥಾ ಪಾಂಥಃ ಗಚ್ಛತಿ, ತಥಾ ಸ್ವತಃ ಅನ್ಯತ್ರ ಆತ್ಮದೃಕ್ ಅವಿವೇಕೀ ಆತ್ಮಾನಂ ಪಶ್ಯತಿ.

ನೀರಿನಿಂದಲೇ ಹುಟ್ಟಿ, ನೀರನ್ನೇ ಮುಚ್ಚಿರುವಂಥ ಪಾಚಿಯನ್ನು ಕಂಡು, ಅದರೊಳಗಿರುವ ಶುದ್ಧವಾದ ನೀರನ್ನೇ ಕಾಣದೇ, ಆ ನೀರನ್ನು ಬಿಟ್ಟು, ಬಾಯಾರಿಕೆಯಿಂದ ನರಳುತ್ತಿರುವ ಪಥಿಕನು ಅಲ್ಲಿ ದೂರದಲ್ಲಿ ಕಾಣಿಸುತ್ತಿರುವ ಮೃಗಮರೀಚಿಕೆಯನ್ನು, ಅಲ್ಲಿ ನೀರಿಲ್ಲದಿದ್ದರೂ ನೀರಿರುವಂತೆ ಕಾಣುತ್ತಿರುವ ಚೌಳುಭೂಮಿಯನ್ನು ನೀರೆಂದು ಭ್ರಮಿಸಿ, ಅಲ್ಲಿಗೆ ಓಡಿ ಓಡಿ ಹೋಗುತ್ತಾ ಆಯಾಸದಿಂದ ಮಾರ್ಗಮಧ್ಯೇ ಕುಸಿದು ಬೀಳುತ್ತಾನೆ. ಅಲ್ಲವೇ? ಅದರಂತೆಯೇ ಅವಿವೇಕಿಯಾದ, ಮೂಢನಾದ ಮನುಷ್ಯನು ಆತ್ಮನಿಂದಲೇ ಹುಟ್ಟಿರುವ ದೇಹಾದಿಗಳನ್ನೇ ತಾನೆಂದು ತಿಳಿದು ಈ ದೇಹಾದಿ ಉಪಾಧಿಗಳಿಂದ ಮುಚ್ಚಿ ಹೋಗಿರುವ ಆತ್ಮನನ್ನೇ ಕಾಣದೇ, ಆ ಆತ್ಮನನ್ನು ಎಲ್ಲಿಯೋ ಹೊರಗಡೆಯಲ್ಲಿ ಕಾಣುತ್ತಾ, ಹೊರಗಡೆಯಲ್ಲಿ ಆನಂದವನ್ನು ಹುಡುಕುತ್ತಾ, ಹುಡುಕುತ್ತಾ, ಹುಡುಕುತ್ತಾ ಅಲ್ಲಿ ಆನಂದವನ್ನು ಕಾಣದೇ ದುಃಖಿಯಾಗಿರುತ್ತಾನೆ. ಇದಕ್ಕೆಲ್ಲ ಕಾರಣ ಎಂದರೆ ವಿವೇಕವಿಲ್ಲದಿರುವುದೇ. ಅಜ್ಞಾನವೇ ಇದಕ್ಕೆಲ್ಲ ಕಾರಣ!

**ತನ್ನೊಳಗೇ ಬ್ರಹ್ಮಾನಂದವನ್ನು ಕಾಣುವವನೇ ಧೀರ**

# 40. ಧೀರ ರಮಣರು

**ವೇದಾಂತದಲ್ಲಿ ಧೀರರು** ಎಂದ ಕೂಡಲೇ ನಮ್ಮ ಕಣ್ಣಮುಂದೆ ನಿಲ್ಲುವ ಮಹಾತ್ಮರೆಂದರೆ **ಭಗವಾನ್ ಶ್ರೀರಮಣಮಹರ್ಷಿಗಳು. ವೆಂಕಟರಮಣನ್** ಎಂಬ ಬಾಲಕನು ವಿವೇಕದಿಂದ, ವಿಚಾರದ ಬಲದಿಂದ ಧೀರ ಸಾಧಕನಾಗಿ ಬ್ರಹ್ಮಾತ್ಮಜ್ಞಾನಿಯೂ ಜೀವನ್ಮುಕ್ತನೂ ಬ್ರಹ್ಮನಿಷ್ಠನೂ ಆಗಿಬಿಟ್ಟನು. ಈಗ ಅವರು **ವೆಂಕಟ** ಎಂಬ ಉಪಸರ್ಗವನ್ನೂ **ನ್** ಎಂಬ ಪ್ರತ್ಯಯವನ್ನೂ ಬಿಟ್ಟು ಕೇವಲ **ರಮಣ**ರಾಗಿ ಆನಂದರಮಣರೇ ಆಗಿಬಿಟ್ಟರು!

ಶ್ರೀರಮಣರ ಜೀವನ, ಸಾಧನ, ತಪಸ್ಸುಗಳೆಲ್ಲವೂ **ವೇದಾಂತದಲ್ಲಿ ಹೇಳಿದ ಧೀರರ** ಲಕ್ಷಣಗಳೇ ಎಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಚಿಕ್ಕ ವಯಸ್ಸಿನಲ್ಲಿಯೇ ಮನೆಯನ್ನು ಬಿಟ್ಟು, ಸಕಲ ಲೌಕಿಕಭೋಗಗಳಿಂದಲೂ ವಿರಕ್ತರಾಗಿ ರಮಣರು ಧ್ಯಾನತಪೋಮಗ್ನರಾದ **ಧೀರರು**. ಮಹಾಮೌನಯೋಗಿಗಳಾದ ಶ್ರೀರಮಣರು ತಮ್ಮ ಹದಿನಾಲ್ಕನೆಯ ವಯಸ್ಸಿನಲ್ಲಿಯೇ ದೇಹಾಧ್ಯಾಸದಿಂದ ವಿಮುಕ್ತರಾಗಿ ಬ್ರಹ್ಮನಿಷ್ಠರಾದ **ಧೀರರು. ನಾನು ಯಾರು?** ಎಂಬೀ ಬೀಜಮಂತ್ರವನ್ನು ವಿವೇಕದಿಂದ ಜಪಿಸುತ್ತಾ, ಕಡೆಗೆ **"ಅಹಂ ಬ್ರಹ್ಮಾಸ್ಮಿ"** ಎಂಬ ಸಹಜ ಸಮಾಧಿಯಲ್ಲಿ ನೆಲೆಗೊಂಡ **ವಿವೇಕಿ ಧೀರರು**, ಶ್ರೀರಮಣರು.

ಬ್ರಹ್ಮಾತ್ಮಜ್ಞಾನದ ಬಲದಿಂದ ಪರಿಚ್ಛಿನ್ನೋಪಾಧಿಗಳನ್ನೆಲ್ಲ ಕಿತ್ತೊಗೆದು ಸರ್ವಾತ್ಮಭಾವದಿಂದ, ಸಹಜಾನಂದದಿಂದ, ಬ್ರಹ್ಮಾನಂದದಿಂದ ಹಾಗೂ ಪರಿಪೂರ್ಣಾನಂದದಿಂದ ಮೆರೆದ **ಧೀರರು ಶ್ರೀರಮಣರು.**

**ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂತ್ ವಿಜಾನತಃ।**
**ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ?॥**

**ಈಶಾವಾಸ್ಯೋಪನಿಷತ್ ೭**

ಎಂಬೀ ಮಂತ್ರಕ್ಕೆ ಜ್ವಲಂತ ಜೀವಂತ ಉದಾಹರಣೆಯಾಗಿದ್ದ, ಸರ್ವಾತ್ಮಭಾವ ಸಂಪನ್ನರಾದ ಜೀವನ್ಮುಕ್ತಪುಂಗವರೇ ಭಗವಾನ್ ಶ್ರೀರಮಣಮಹರ್ಷಿಗಳು.

ಬ್ರಹ್ಮಾತ್ಮಜ್ಞಾನದ ಫಲವೆಂಬುದು ಪರೋಕ್ಷವಲ್ಲ , ಸತ್ತಮೇಲೆ ದೊರಕುವ ಫಲವೂ ಅಲ್ಲ; ಈ ಜನ್ಮದಲ್ಲಿಯೇ ಈಗಲೇ ಅನುಭವಕ್ಕೆ ಬರುವ ಫಲವೇ ಮೋಕ್ಷ ಎಂಬ ಅದ್ವೈತವೇದಾಂತದ ಶ್ರೀಶಂಕರರ ಸಂದೇಶಗಳನ್ನು ಸತ್ಯಮಾಡಿದ ಧೀರರೇ ಶ್ರೀರಮಣಮಹರ್ಷಿಗಳು! ಹುಲಿ, ಸಿಂಹ, ನಾಗರಹಾವು, ನಾಯಿ, ಹಸು, ಅಳಿಲು, ಕೋತಿ, ಬೆಕ್ಕು, ಸೊಳ್ಳೆ, ನೊಣಗಳಲ್ಲಿಯೂ ತಮ್ಮನ್ನೇ ಕಂಡ ಸರ್ವಭೂತಾತ್ಮರು ಧೀರ ಶ್ರೀರಮಣರು.

**ರಮಣರನ್ನು ವೇದಾಂತದಲ್ಲಿ ಧೀರರು ಎಂದು ತಿಳಿಯಬೇಕು**

## ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾರವರ ವೇದಾಂತ ಗ್ರಂಥಗಳು

1. "ವಿವೇಕಭಾಸ್ಕರ"
2. "ಶಾಂಕರ ಸಂವತ್ಸರ"
3. "ವೇದಾಂತ ಸಂವತ್ಸರ"
4. "ಗೀತಾ ಸಂವತ್ಸರ"
5. "ಸುಭಾಷಿತ ಸಂವತ್ಸರ"
6. "ಪ್ರಬೋಧ ಚಿಂತಾಮಣಿ"
7. "ಜ್ಞಾನಾಮೃತಬಿಂದು"
8. "ಗೀತೋಪದೇಶಾಮೃತ"
9. "ಜರ್ಮನಿಯಲ್ಲಿ ಶರ್ಮರು"
10. ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾ
11. "ವ್ಯಾಸ ಪೂರ್ಣಿಮಾ"
12. "ಕೇನ ರಸಾಯನ"
13. "ಜೀವನ್ಮುಕ್ತ ಚತುಷ್ಟಯ"
14. "ಶಿವರಾತ್ರಿ"
15. "ನವೋಪನಿಷದಃ"
16. "ಶಾಂತಿಮಂತ್ರಗಳು"
17. "ವೇದಮಹಿಮೆ"
18. "50 Reflections on Morals"
19. "ಪೀಯೂಷ ಧಾರಾ"
20. "ಆದಿಗುರು ಶಂಕರ"
21. "48 'ಅಷ್ಟಕ' ಸ್ತೋತ್ರಗಳು"
22. "ಕನ್ನಡ ಶಂಕರ"
23. "ಆರಾಧನ ಸಂದೇಶ"
24. "ಸರಳ ರಮಣ"
25. "ನ ಹಿ ಜ್ಞಾನೇನ ಸದೃಶಂ"
26. "ಉಪದೇಶಸಿಂಚನಂ"
27. "ಸುದಿನಂ"
28. "ಶಂಕರಜಯಂತೀ"
29. "ಬಾಲರಾಮಾಯಣಂ"
30. "ಸಂದೇಶಾಮೃತ"
31. "ವಿಭೂತಿರೂಪಿಕೃಷ್ಣ"
32. "ಅಧ್ಯಾರೋಪಾಪವಾದ"
33. "ಶಂಕರ Ph.D."
34. "ಗೌಡಪಾದಾಮೃತ"
35. "ವೇದಾಂತಮಕರಂದ"
36. "ಶ್ರೀರಮಣಸುಧಾ"
37. "ಧರ್ಮ-ವೇದ-ಬ್ರಹ್ಮ"
38. "ಸದ್ಗುರೂಪಾಸನಂ"
39. "ಜನ್ಮಾಂತರ"
40. "ಗೀತಾಕಲ್ಪತರು"
41. "ಮಹರ್ಷಿಗಳು"
42. "ಉಪನಯನಂ"
43. "ಔಪನಿಷದ ಪುರುಷ"
44. "ಸಂಸ್ಕೃತ ವೈಭವ"
45. "ತೈತ್ತಿರೀಯದ ತಿರುಳು"
46. "ರಾಮಾಂಜನೇಯ"
47. ವೇದಾಂತದಲ್ಲಿನ ಪದಗಳೂ ಅರ್ಥಗಳೂ
48. "ತತ್ತ್ವಮಸಿ"
49. "ಬ್ರಹ್ಮಜ್ಞಾನಫಲಂ"
50. "ಜ್ಞಾನಸಾಧನಗಳು"
51. "108 'ಅಷ್ಟಕ' ಸ್ತೋತ್ರಗಳು"
52. "ಚತುಷ್ಟಯ ಸಂಗ್ರಹ"
53. "ಸಂಗ್ರಾಹಕ ಶ್ಲೋಕಗಳು"
54. "ಶ್ರೀಶ್ರೀಗಳ ಸಂಶೋಧನೆ"
55. "ಮಹರ್ಷಿಗಳ 'ಅಷ್ಟಕ' ಸ್ತೋತ್ರಗಳು"
56. "ಶಾಂಕರ ಮಕರಂದ"
57. "ನೀತಿ ಶ್ಲೋಕಗಳು"
58. "ಕೈವಲ್ಯೋಪನಿಷತ್"
59. "ವಿವೇಕ ರತ್ನ"
60. "ಗುರುಶಿಷ್ಯ ಸಂಬಂಧ"
61. "ಲಕ್ಷಣ ಶ್ಲೋಕಗಳು"
62. "ಶ್ರೀರಮಣರ ಉಪದೇಶಸಾರ"
63. "ಅಜ್ಞಾನ ವಿಮುಕ್ತಿ"
64. "ವಂದೇ ಶಂಕರಸದ್ಗುರುಮ್"
65. "ಚತುಸ್ಸೂತ್ರೀಭಾಷ್ಯಸಾರ"
66. ಶ್ರೀರಮಣಮಹರ್ಷಿಗಳ "ಸದ್ದರ್ಶನಮ್"
67. "ತಸ್ಮೈ ಶ್ರೀಗುರವೇ ನಮಃ"
68. "ಗೀತೋಪನಿಷತ್"
69. "ಪ್ರಸ್ಥಾನತ್ರಯಂ"
70. "ಪ್ರಥಮ ಪುಸ್ತಕಂ"
71. "ನನ್ನ ಗುರುಕುಲವಾಸ"
72. "ವೇದಾಂಗಗಳು"
73. "ಗೀತಾಜಯಂತೀ"
74. "ಶಂಕರಹೃದಯಂ"
75. "ಮಕ್ಕಳಿಗಾಗಿ ಸ್ತೋತ್ರಗಳು"
76. "ಗೀತೆಯಲ್ಲಿ ಗುಣವಿಮರ್ಶೆ"
77. "ಸದ್ಗುರುಭಾಸ್ಕರ"
78. "ಶಾಂಕರಭಾಷ್ಯಾಮೃತಂ"
79. "ಶ್ರೀಸುರೇಶ್ವರರ ಸಿಂಹಗರ್ಜನೆ"
80. "ಉಪಮಾ ಕಾಳಿದಾಸಸ್ಯ"

81. "ಪ್ರಣವೋಪಾಸನಂ"
82. "ಕವಿಮುನಿ ಕಂಡ ಶಿವ"
83. "ಬ್ರಾಹ್ಮೀಸ್ಥಿತಿಗೆ 40 ಸೋಪಾನಗಳು"
84. "ಶಾಂಕರಬೋಧಾಮೃತಂ"
85. "ಪ್ರಬೋಧ ಶ್ಲೋಕಗಳು"
86. "ವೇದಾಂತಡಿಂಡಿಮಸಾರ"
87. "ಶತಕತ್ರಯಸಾರ"
88. "ಪಂಚಕ ಪಂಚಕಂ"
89. "ನೈಷ್ಕರ್ಮ್ಯಸಿದ್ಧಿಸಾರ"
90. "ಈಶಾವಾಸ್ಯಮಿದಂ ಸರ್ವಂ"
91. "ಮಾತೃದೇವೋ ಭವ"
92. "ಸುರೇಶ್ವರ ಸಂವತ್ಸರ"
93. "70ರ ವೀರವೇದಾಂತಿ"
94. "ತುರೀಯಂ ಪದಂ"
95. "ಬ್ರಹ್ಮಚರ್ಯವ್ರತಂ"
96. "ಗೀತೆಯಲ್ಲಿ ಸಾಂಖ್ಯಯೋಗ"
97. "ಶ್ರವಣದ ಮಹತ್ತ್ವ"
98. "ವಿದುರನೀತಿಸಾರ"
99. "ದಾನದ ಮಹಿಮೆ"
100. "ಅದ್ಭುತ ಶಂಕರ"
101. "ಸೂರ್ಯೋಪಾಸನಂ"
102. "ಕೃಷ್ಣಂ ವಂದೇ ಜಗದ್ಗುರುಂ"
103. "ಗುರುಸ್ತುತಿ ಸಂವತ್ಸರ"
104. "ಮಾಸೋತ್ಸವಗಳು"
105. "ವೈರಾಗ್ಯಭಾಗ್ಯ"
106. "ವೇದಾಂತಗಳೂ ವೇದಾಂಗಗಳೂ"
107. "ದರ್ಶನಪರಿಚಯ"
108. "ವಾಕ್‌ಸಂಪತ್ತು"
109. "ವೇದಾಂತದಲ್ಲಿ ಧೀರರು"

**ವೇದಾಂತ ಪ್ರವಚನಗಳು M.P. 3 ಸಿ.ಡಿ.ಗಳಲ್ಲಿ ಲಭ್ಯವಿವೆ**

(ಶಾಂಕರಭಾಷ್ಯಸಮೇತಂ) 1. ಈಶಾವಾಸ್ಯ 2. ಕೇನ 3. ಮುಂಡಕ 4. ಪ್ರಶ್ನ 5. ಮಾಂಡೂಕ್ಯ 6. ತೈತ್ತಿರೀಯ 7. ಐತರೇಯ 8. ಶ್ವೇತಾಶ್ವತರೋಪನಿಷತ್ 9. ದಶೋಪನಿಷತ್ ಸಂದೇಶ 10. ಬ್ರಹ್ಮಸೂತ್ರಭಾಷ್ಯಂ (ಚತುಸ್ಸೂತ್ರೀಭಾಷ್ಯಂ) 11. ಅಧ್ಯಾರೋಪಾಪವಾದಪ್ರಕ್ರಿಯೆ 12. ನಮಗೆ ಇಂದು ವೇದಾಂತ ಬೇಕೆ? 13. ದ್ವಾದಶವೇದಾಂತರತ್ನಮಾಲಿಕಾ 14. ದಶೋಪನಿಷತ್ DVD 15. अध्यारोप अपवादमहिमा 16. Avasthaatraya Prakriya 17. माण्डूक्यरहस्यविवृतिः 18. ಗೀತೋಪನ್ಯಾಸ DVD 19. ಸಸ್ವರ ತೈತ್ತಿರೀಯ, ಪುರುಷಸೂಕ್ತ ಮಂತ್ರ ಪಠನ 20. ಬ್ರಹ್ಮಸೂತ್ರಶಾಂಕರಭಾಷ್ಯಸಾರ DVD 21. Power of Shaanthi Manthras 22. Essence of the Maandukya Upanishad 23. ಕನ್ನಡ ಶಂಕರ, ಪೂಜ್ಯ ಶ್ರೀ ಶ್ರೀಗಳವರು 24. Jagadguru Sri Shankara Bhagavathpaadaachaarya 25. 60 ಶಾಂಕರಭಾಷ್ಯಪ್ರವಚನಗಳ ಸಾರ 26. ಶ್ರೀಶಂಕರರ ನಿರ್ವಾಣಷಟ್ಕಂ 27. ವ್ಯಾಸಪೂಜಾ, ಗುರ್ವಷ್ಟಕಂ 28. वेदान्तप्रक्रियाप्रत्यभिज्ञा 29. ಪರಮಾರ್ಥ ಚಿಂತಾಮಣಿ

---

**For Copies and other Books Please Contact**
**Vedanta Ratna, Mahaamahopaadhyaaya, Vidwan**
**Dr. K. G. SUBRAYA SHARMA, M.A., D.Litt.**
**# 127, "Seetha-Preethi", Balaji Nagar, ICICI Bank Cross Rd.,**
**Uttarahalli Main Rd. P. O. Subrahmanyapura, Bengaluru - 560 061**
**Ph: 080-2639 6786 ; Mobile: 98862 81622**
**e-mail: kgssharma@gmail.com, website: kgssharma.in**



**"ವೇದಾಂತಗಳೂ ವೇದಾಂಗಗಳೂ"**-106 ಕೃತಿರತ್ನವನ್ನು ಲೋಕಾರ್ಪಣೆ ಮಾಡಿದಮೇಲೆ
ಶ್ರೀ ವೈ. ಎಸ್. ಭಗವಾನ್ ರವರು ಗ್ರಂಥಪರಿಚಯವನ್ನು ಮಾಡಿಸುತ್ತಿದ್ದಾರೆ; 22-6-2019, ಶನಿವಾರ



**"ಗುರುಸ್ತುತಿ ಸಂವತ್ಸರ"**-103 ಗ್ರಂಥರತ್ನವನ್ನು ಲೋಕಾರ್ಪಣೆ ಮಾಡಿದನಂತರ
ಡಾ॥ ಪ್ರೊ. ಪ್ರಭಾಕರ ಬೆಳವಾಡಿಯವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಿದ್ದಾರೆ; 29-1-2019 ಮಂಗಳವಾರ

